

ಶ್ರೀಮತಿ ಜಯಲಕ್ಷ್ಮೀ ಆರ್. ಶ್ರೀನಿವಾಸನ್

# ಮುನ್ನುಡಿ

ತಾಯಿ ಸೌಭಾಗ್ಯವತಿ ಜಯಲಕ್ಷ್ಮಮ್ಮನವರು ತಮ್ಮ ಈ ಸಣ್ಣ ಕತೆಗಳ ಪುಸ್ತಕಕ್ಕೆ ನನ್ನಿಂದ ಒಂದು ಮುನ್ನುಡಿ ಬೇಕೆಂದು ಅಪೇಕ್ಷಿಸಿದಾರೆ. ಆದದ್ದರಿಂದ ಈ ನಾಲ್ಕು ಮಾತನ್ನು ಬರೆಯುತ್ತಿದೇನೆ. ನಮ್ಮ ನಾಡ ಜೀವನದ ಬಹುಮುಖವನ್ನು ಚಿತ್ರಿಸುವ ಬಹು ರೀತಿಯ ಕತೆ ನಮಗೆ ಬೇಕಾಗಿದೆ. ತಾಯಿಯಾದವರು ಮಕ್ಕಳ ಬಾಳನ್ನು ಚಿತ್ರಿಸುವುದು ಈ ರೀತಿಗಳಲ್ಲಿ ಒಂದು. ಸೌ॥ ಜಯಲಕ್ಷ್ಮಮ್ಮನವರು ಈ ಪುಸ್ತಕದಲ್ಲಿ ಇಂತ ಕತೆಗಳನ್ನೇ ಕೂಡಿಸಿದಾರೆ. ಅವರು ಮಕ್ಕಳ ಬದುಕನ್ನು ತಾಯಿಗೆ ಸಹಜವಾದ ಒಂದು ತಿಳಿನೋಟದಿಂದ ತಿಳಿದಿದಾರೆ. ತಮ್ಮ ಸುಖಮಯ ಜೀವನ ಅಷ್ಟರಲ್ಲೇ ಮುಳುಗಿರದೆ ಬಳಿಗೆ ಬಂದ ಬಡವರ ಬಾಳನ್ನು ಗಮನಿಸಿ ನೋಡಿದಾರೆ. ಹಣವಂತಿಕೆ ಜಾತಿರೂಪಿಗಿಂತ ಗುಣ ಮುಖ್ಯ ವೆಂಬುದನ್ನು ಮನಗಂಡಿದಾರೆ. ಈ ತಮ್ಮ ನಿಜವಾದ ಅನುಭವವನ್ನೂ ವಿಶಾಲ ಮನಸ್ಸನ್ನೂ ಈ ಕತೆಗಳಲ್ಲಿ ಮೂಡಿಸಿದಾರೆ. ಇಲ್ಲಿಯ ಮಕ್ಕಳು ತಾಯಿ ತಂದೆಯರು ನಿಜವಾದ ಪ್ರಪಂಚದವರು. ಇಲ್ಲಿಯ ನಡೆ ನುಡಿ ಯಲ್ಲ ಸಹಜವಾದದ್ದು. ಸಂಗತಿಯೂ ಒಂದೆರಡು ಸಂದರ್ಭ ಹೊರತಾಗಿ ಉಳಿದಂತೆ ಸಂಭಾವ್ಯವೇ. ಆ ಒಂದೆರಡು ಸಂದರ್ಭವೂ ಮನುಷ್ಯರು ಆಶಿಸುವ ಲೋಕದವು. ಈ ಆಶೆಯಾದರೂ ರಮ್ಯವಾದದ್ದೇ. ತಮಗೆ ತಿಳಿದ ಮತ್ತು ತಮ್ಮ ಆಶೆಯ ಪ್ರಪಂಚದ ವಿವರವನ್ನು ಇಷ್ಟು ಕೌಶಲ ದಿಂದ ಸಾಹಿತ್ಯಕ್ಕೆ ತಂದಿರುವ ಬಗ್ಗೆ ನಾನು ಸೌಭಾಗ್ಯವತಿ ಲೇಖಕಿಯ ರನ್ನು ಅಭಿನಂದಿಸುತ್ತೇನೆ. ನಮ್ಮ ಜನ ಈ ಪುಸ್ತಕಕ್ಕೆ ತಕ್ಕ ಪ್ರೋತ್ಸಾಹ ಕೊಡಲೆಂದೂ ಅದರಿಂದ ಸೌಭಾಗ್ಯವತಿ ಜಯಲಕ್ಷ್ಮಮ್ಮನವರೂ ಇವರಂತೆ ಇನ್ನೂ ಹಲವರು ನಮ್ಮ ತಾಯಂದಿರು ತಂಗಿಯರೂ ಗ್ರಂಥರಚನೆ ಮಾಡಿ ನಮ್ಮ ಸಾಹಿತ್ಯವನ್ನು ಬೆಳೆಸುವಂತಾಗಲೆಂದೂ ಆಶಿಸುತ್ತೇನೆ.

**ಮಾಸ್ತಿ ವೆಂಕಟೇಶ ಅಯ್ಯಂಗಾರ್.**

# ಎರಡು ಮಾತು

ನನಗೆ ಬಹಳ ದಿವಸಗಳಿಂದಲೂ ಮಕ್ಕಳ ಮನಶ್ಶಾಸ್ತ್ರವನ್ನು ಅಧ್ಯಯನಮಾಡಿ ಸಣ್ಣ ಕತೆಗಳನ್ನು ಬರೆಯಬೇಕೆಂಬ ಬಯಕೆಯುಂಟು. ಆ ನನ್ನ ಉದ್ಯಮದ ಫಲವಾಗಿ ಈ ಪುಟ್ಟ ಗ್ರಂಥದಲ್ಲಿ ಅಡಕವಾಗಿರುವ ಹತ್ತು ಕತೆಗಳೂ ಅರಳಿವೆ. ಇವನ್ನು ಸಕಲರೂ ಓದಿ ನನ್ನ ಈ ಉದ್ಯಮವನ್ನು ಪ್ರೋತ್ಸಾಹಿಸಿ, ಸಾರ್ಥಕಗೊಳಿಸುವರೆಂದು ನಂಬುತ್ತೇನೆ.

ಈ ಪುಟ್ಟ ಗ್ರಂಥಕ್ಕೆ ಅಲಂಕಾರಪ್ರಾಯವಾಗಿ ಬೆಳಗುವ ಅಮೂಲ್ಯವಾದೊಂದು ಮುನ್ನುಡಿಯನ್ನು ಬರೆದು ಒದಗಿಸಿಕೊಟ್ಟ ಶ್ರೀಮಾನ್ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರಿಗೂ, ಗ್ರಂಥವನ್ನು ಅತ್ಯಂತ ಶ್ರಮವಹಿಸಿ ಸಕಾಲಕ್ಕೆ ಅಂದವಾಗಿ ಪ್ರಚುರಗೊಳಿಸಿಕೊಟ್ಟ ಬೆಂಗಳೂರು ಪ್ರೆಸ್ಸಿನವರಿಗೂ ನನ್ನ ಸವಿನಯಪೂರ್ವಕವಾದ ಧನ್ಯವಾದಗಳು.

ಈ ಪುಟ್ಟ ಗ್ರಂಥದಲ್ಲಿ ಅಡಕವಾಗಿರುವ ಕತೆಗಳು :— 'ಜಯಕರ್ಣಾಟಕ', 'ಛಾಯಾ', 'ದೇಶಬಂಧು', 'ಕಥಾಂಜಲಿ', 'ಕಥಾವಳಿ' ವಾರ್ಷಿಕ ಸಂಚಿಕೆ, 'ಪ್ರಜಾಮತ' ದೀಪಾವಳೀ ಸಂಚಿಕೆ ಮುಂತಾದುವುಗಳಲ್ಲಿ ಮೊಟ್ಟಮೊದಲು ಬೆಳಕು ಕಂಡಿವೆ. ಆಯಾ ಪತ್ರಿಕಾ ಸಂಪಾದಕರುಗಳಿಗೆ ನನ್ನ ಧನ್ಯವಾದಗಳು.

**ಜಯಲಕ್ಷ್ಮೀ ಆರ್. ಶ್ರೀನಿವಾಸನ್.**

# ಅರ್ಪಣೆ

ನನ್ನ
ಪೂಜ್ಯ ಅತ್ತೆಯವರ
ಅಡಿದಾವರೆಗಳಲ್ಲಿ ಈ ಗ್ರಂಥವನ್ನು
ಅತಿ ನಮ್ರತೆಯೊಡನೆ
ಅರ್ಪಿಸುತ್ತೇನೆ

# ವಿಷಯಾನುಕ್ರಮಣಿಕೆ



**ಸೂಚನೆ :—** ಈ ಪುಸ್ತಕದಲ್ಲಿರುವ ಕತೆ ಒಂದರ ವಿನಾ ಮಿಕ್ಕವೆಲ್ಲವೂ ನನ್ನ ಸ್ವಯಂ ಪ್ರೇರಿತವಾದುವು. "ಮಗುವಿನ ಸಮಸ್ಯೆ" ಎಂಬುದೊಂದು ಕತೆ ಮಾತ್ರ ತಮಿಳು ಕತೆಯೊಂದರ ಆಧಾರದಿಂದ ಬರೆದುದು.

# ಹಸುರು ಲಂಗ

ಹಿಂದಿನ ದಿವಸ ನಮ್ಮೂರಿನ ಮಹಿಳಾ ಸಮಾಜದ ವಾರ್ಷಿಕೋತ್ಸವವು ನೆರವೇರಿತು. ಆ ಸಂಘದಲ್ಲಿ ನಾನೂ ಒಬ್ಬ ಮುಖ್ಯ ಅಧಿಕಾರಿಯಾದುದರಿಂದ ಹದಿನೈದು ದಿವಸಗಳ ಹಿಂದಿನಿಂದಲೂ ನನಗೆ ಅಸಾಧ್ಯವಾಗಿ ಕೆಲಸವಿತ್ತು. ಮನೆಯಲ್ಲೊಂದು ವಿವಾಹವು ಜರುಗಿ ಬೀಗರನ್ನು ಊರಿಗೆ ಕಳುಹಿಕೊಟ್ಟ ದಿವಸ ಉಂಟಾಗುವಂತಹ ಶಾಂತತೆಯೂ, ಆಯಾಸವೂ ಅಂದು ನನಗೆ. ಮಧ್ಯಾಹ್ನದ ಊಟ ಮುಗಿದ ಬಳಿಕ ಅವರೂ, ಮಗು ಪದ್ಮಳೂ ಕಛೇರೀ ಪಾಠಶಾಲೆಗಳಿಗೆ ತೆರಳಿದ ಬಳಿಕ ಹೊದಿಕೆಯನ್ನು ಎಳೆದು ಹೊದ್ದುಕೊಂಡು ಮಲಗಿದವಳು ಸಂಜೆ ನಾಲ್ಕು ಘಂಟೆಗೇ ಎಚ್ಚರವಾಯಿತು. ಎಂದರೆ ನನಗೆ ಆಯಾಸವೆಷ್ಟು ಇತ್ತೆಂಬುದನ್ನು ಊಹಿಸಿ ನೋಡಿ.

ಸರಿ, ಅಡಿಗೆಯವನು ತಂದುಕೊಟ್ಟ ಕಾಫಿಯನ್ನು ಎರಡು ಗುಟುಕಿನಲ್ಲಿ ಕುಡಿದುಬಿಟ್ಟು, ಕೆದರಿಹೋಗಿದ್ದ ತಲೆಯನ್ನು ಸರಸರನೆ ಬಾಚಿ ಹೆಣೆದುಕೊಂಡು, ಮುಖ ತೊಳೆದುಕೊಂಡು, ಚೌಕದಿಂದ ಮುಖವನ್ನು ಒರೆಸಿಕೊಳ್ಳುತ್ತಲಿದ್ದೆ. ಯಾಕಿಷ್ಟು ಅವಸರವೆಂದರೆ ನಾನು ಎಂದೂ ಹಗಲು ಇಷ್ಟುಹೊತ್ತು ನಿದ್ರೆಮಾಡಿರಲಿಲ್ಲ. ಆದುದರಿಂದ ಅಂದು ನನಗೆ ಬಹಳ ನಾಚಿಕೆಯಾಯಿತು. ಅವರೂ ಪದ್ಮಳೂ ಬರುವುದರೊಳಗಾಗಿ ಅಲಂಕರಿಸಿಕೊಂಡು ನಿದ್ದೆಯಿಂದ ಮಂಕುಮಂಕಾಗಿರುವ ಮುಖವನ್ನು ಸರಿಪಡಿಸಿಕೊಳ್ಳುವ ಅವಸರ. ನಾನು ಮುಖವನ್ನು ಒರಸಿಕೊಳ್ಳುತ್ತಿರುವಾಗಲೇ 'ಅಮ್ಮಾ, ಅಮ್ಮಾ' ಎಂದು ಕೂಗುತ್ತಾ ನನ್ನ ಮುದ್ದುಗುವರಿಯು ಓಡೋಡಿ ಬಂದು ಕೈಯ್ಯಲ್ಲಿದ್ದ ಪುಸ್ತಕದ ಚೀಲವನ್ನು ಮೇಜಿನಮೇಲೆ ಬಿಸುಟುಬಿಟ್ಟು ನನ್ನನ್ನು ತಬ್ಬಿಕೊಂಡಳು.

"ಹೋಗು, ಚಿನ್ನಾ! ಬೇಗ ಕಾಫೀ ತಿಂಡಿ ತೆಗೆದುಕೊಂಡು ಬಾ" ಎಂದು ಅವಳನ್ನು ಅಡಿಗೆಯ ಮನೆಗೆ ಕಳುಹಿಸಿಬಿಟ್ಟು, ನಾನು ಕುಂಕುಮದ

ಬೊಟ್ಟಿಟ್ಟುಕೊಂಡು, ಎಣ್ಣೆ ಬಾಚಣಿಗೆಗಳನ್ನು ತೆಗೆದುಕೊಂಡು ತಯಾರಾಗಿ ಅಂಗಳದ ವರಾಂಡಾದಲ್ಲಿ ಬಂದು ಕುಳಿತೆ. ಐದು ನಿಮಿಷಗಳ ಬಳಿಕ ಪದ್ಮಳೂ ಓಡಿಬಂದು ಕುಳಿತಳು. ಅವಳ ತಲೆ ಬಾಚಿ ಎರಡು ಹೆರಳು ಹಾಕಿರುವೆನಷ್ಟೇ, ಅಷ್ಟರೊಳಗಾಗಿ ಮುಸುರೆಯು ಕೆಂಪಿ ಬಂದು "ಅವ್ವಾ, .... ಅವ್ವಾ" ಎಂದು ಸೀರೆಯ ಸೆರಗಿನ ತುದಿಯಲ್ಲಿ ಹಾಕಿದ್ದ ಗಂಟನ್ನು ಬಿಚ್ಚುತ್ತಾ ನಿಂತಳು.

"ಅವ್ವನಿಗೇನೇ ಗ್ರಹಚಾರ?" "ಇಲ್ರವ್ವಾ, ಮೂರನೇ ಮನೇ.. ಅವ್ರೋರೂ.... ಇದೇ ತಾನೇ ಎರಡು ತಿಂಗ್ಳ ಸಂಬ್ಳಾ.... ಐದು ರೂಪಾಯೂವೇ ಕೊಟ್ರು...."

"ಸರಿ, ನಿನ್ನ ಸಾಲ ತೀರಿಸಿಬಿಟ್ಟು ಹೋಗು ಮತ್ತೆ, ಕೊಡು ಇಲ್ಲಿ ಆ ರೂಪಾಯ್ನ."

"ಇಲ್ರವ್ವಾ, ಕೂಸು ಖಾಯಿಲ್ಲೆ ಬಿದ್ದಾಗ ನೀನು ಅಟೋಂದು ಉಪ್ಕಾರ ಮಾಡ್ದೇ ಓಗಿದ್ರೆ ನನ್ಕೂಸು ಬದುಕುತ್ತಿತ್ತೇನ್ರವ್ವಾ. ನೀನೇ ನಮ್ಗನೇ ಮಾದೇವಿ ತಾಯಿ! ನಿನ್ಹತ್ರ ಇನ್ನೂ ರವಷ್ಟು ಉಪ್ಕಾರ ಆಗ್ಬೇಕೈತೇ ಅವ್ವಾ! ಅದ್ನ ಮಾಡಿ...."

"ಏನೇ ಅದು ಅನಿಷ್ಟ! ನನ್ನನ್ನು ಪೀಡಿಸೋಕೆ ಬಂದುಬಿಟ್ಟೆ ಯೇನು? ನನಗೆ ನಿನ್ನೊಡನೆ ಹರಟೆಗೆ ಈಗ ಅವಕಾಶವಿಲ್ಲ. ಸುಮ್ಮನೆ ಆ ರೂಪಾಯನ್ನು ಇಲ್ಲಿ ಕೊಟ್ಟು ಹೋಗು" ಎಂದು ಗದರಿಸಿದೆ.

"ಅವ್ವಾ ನನ್ನ ದಯಮಾಡಿ ಮನ್ನಿಸ್ಬೇಕ್ರವ್ವಾ, ಮುಂದಿನ ತಿಂಗ್ಳು ನಿಮ್ಗೆ ಐದು ರೂಪಾಯ್ನೂವೇ ತಂದು ಕೊಟ್ಟಿಡ್ತೀನಿ. ನನ್ಕೂಸು ಖಾಯಿಲೇಲಿ 'ಚಿಕ್ಕವ್ವಾವ್ರು ಉಟ್ಕೊಳ್ಳೋ ಅಂತಾದು ಪಸ್ರು ಲಂಗ ನನ್ಗೂನೂವೆ ಒಂದು ಕೊಂಡ್ಕೊಡವ್ವಾ' ಎಂದು ಸುಮ್ಮನೆ ಕಿರಿಚಿ ಕೊಳ್ತಿತ್ತು. 'ಖಾಯ್ಲೆ ವಾಸಿಯಾದ್ಮೇಕೆ ಕೊಂಡ್ಕೊಡ್ತೀನಿ' ಅಂತ ಹೇಳ್ಬಿಟ್ಟೆ. ಈಗ ಅದ್ನೆ ಹಿಡ್ಕೊಂಡು ನನ್ನನ್ನು ಪೀಡಿಸ್ತೈತೇ. ಈ ರೂಪಾಯ್ಗೆ ಅಂತಾದ್ದು ಒಂದು ಲಂಗಾನ್ನ ನೀನು ಕೊಂಡ್ಕೊಟ್ಬಿಟ್ರೆ ನಿಂಗೈ ಏಟೊಂದು ಪುಣ್ಯ ತಾಯಿ, ಬರೋ ತಿಂಗ್ಳು ಖಂಡಿತವಾಗ್ಯೂನೂವೆ ದುಡ್ಡು ತಂದು ಸಾಲ ತೀರಿಸಿಬಿಡ್ತೇನ್‌ಕನ್ರವ್ವಾ......"

"ಅದೆಲ್ಲ ಆಗೋಲ್ಲ. ಬಹಳ ಚೆನ್ನಾಗಿದೆ ನಿನ್ನ ಕೆಲಸ. ಕಸ ಗುಡಿಸೋ ಪರಕೇ ಕಟ್ಟೋಕೆ ರೇಷ್ಮೇ ದಾರಾನೇ? ಹಣಾ ಹೀಗೆ ಕೊಡುತ್ತೀಯೋ! ಇಲ್ಲವೋ?"

"ಕೊಡೋಕೇನೆ ಬಂದವ್ನೆ........ಬಡವಳ ಮ್ಯಾಕೆ ದಯಾ ಇಟ್ರೀ...." ಎಂದು ಕಣ್ಣುಗಳಲ್ಲಿ ನೀರನ್ನು ತುಂಬಿಕೊಂಡು ನಡುಗುವ ಕೈಯಲ್ಲಿ ಸೆರಗಿನಲ್ಲಿ ಹಾಕಿದ್ದ ಗಂಟನ್ನು ಬಿಚ್ಚಿ ಐದು ರೂಪಾಯಿನ ನೋಟೊಂದನ್ನು ತೆಗೆದು ನನ್ನ ಮುಂದಿಟ್ಟಳು. ಬಳಿಕ ನನ್ನ ಮನಸ್ಸು ಬಹುಶಃ ತಿರುಗುವುದೋ ಎಂಬ ನಂಬಿಕೆಯೊಡನೆ ಹಿಂದಿರುಗಿ ನೋಡುತ್ತ ನೋಡುತ್ತ ಹೊರಟುಹೋದಳು. ನೋಟನ್ನು ತೆಗೆದು ಸೊಂಟದಲ್ಲಿ ಸಿಕ್ಕಿಸಿ ಕೊಂಡೆ. ಮಗು ಪದ್ಮಳು 'ಅ..ಪ್ಪಾ..' ಎಂದು ಏನೋ ಹೇಳಲು ಬಾಯಿ ತೆರದಳು. ಅವಳನ್ನು ಗದರಿಸಿ ಬಾಯಿ ಮುಚ್ಚಿಸಿದೆ. ಅಷ್ಟರ ಮೇಲೆ ಮಾತನಾಡದೆ ಅಲ್ಲಿಂದ ಎದ್ದು ಹೊರಟೇಹೋದಳು ಪದ್ಮಾ. ಆಗ ಜವಾನ ಸಿದ್ದನು 'ದೇಶಬಂಧು' ಪೇಪರನ್ನು ತಂದು ನನ್ನ ಮುಂದೆ ಇಟ್ಟು ಹೋಗಿದ್ದ. ಅದನ್ನು ತೆಗೆದು ಹಾಗೆಯೇ ಓದತೊಡಗಿದೆ.

## "ಪ್ರಪಂಚದ ಅತಿಶಯ!" ತನ್ನ ಪಾಪ ತನ್ನನ್ನು ಅಳಿಸುವುದು

### ಕೊಟ್ಟಪಾಳ್ಯದ ರೈಲ್ವೇಸ್ಟೇಷನ್ನಿನಲ್ಲಿ ಜರುಗಿದ ಘಟನೆ!

"ಕೊಟ್ಟಪಾಳ್ಯದ ಪೋಸ್ಟ್‌ಮಾಸ್ಟರ್ ಶ್ರೀಮಾನ್......ರವರು ಯಾವುದೋ ಊರಿನಿಂದ ಹಿಂದಿರುಗಿದವರು ಕೊಟ್ಟಪಾಳ್ಯದ ಸ್ಟೇಷನ್ನಿನಲ್ಲಿ ರೈಲಿನಿಂದಿಳಿಯುವಾಗ ಹತ್ತು ವರ್ಷದ ಭಿಕ್ಷುಕ ಹುಡಿಗಿಯೋರ್ವಳು ಅವರನ್ನು ಸಮೀಪಿಸಿ ಭಿಕ್ಷೆ ಬೇಡಿದಳಂತೆ. ಅವರು ಅವಳನ್ನು ಗದರಿಸಿ ಓಡಿಸಲಾಗಿ, ಪುನಃ ಅವಳು ಅವರನ್ನು ಸಮೀಪಿಸಿ ಭಿಕ್ಷೆ ಬೇಡಿದಳು. ಕೋಪದಿಂದ ಅವರು ಆ ಹುಡುಗಿಯನ್ನು ಒದೆಯಲು, ಅವರ ಬೂಟ್ಸಿನ ಕಾಲು ಹುಡುಗಿಯ ಹೊಟ್ಟೆಗೆ ತಗುಲಿ ಹುಡುಗಿಯು ಜ್ಞಾನ ತಪ್ಪಿ ಬಿದ್ದಳಂತೆ. ಜೋಡಿನ ಕಾಲು ತಗಲಿದ ಜಾಗದಲ್ಲಿ ಕಂದಿಹೋಗಿ, ಹೊಟ್ಟೆ ಯೊಳಗಡೆ ರಣವಾಗಿ, ಅಂದಿಗೆ ಹದಿನೈದನೇ ದಿವಸ ಆ ಭಿಕ್ಷುಕ ಹುಡುಗಿ

ಸತ್ತುಹೋದಳು. ಪೋಸ್ಟ್‌ಮಾಸ್ಟರರ ಅದೇ ಪ್ರಾಯದ ಮಗಳಿಗೆ ಹೊಟ್ಟೆಯಲ್ಲಿ ಹುಣ್ಣು ಕಂಡು, ಭಿಕ್ಷುಕ ಹುಡುಗಿಯು ಸತ್ತ ಹದಿನೈದನೆಯ ದಿನ ಅವಳೂ ಸತ್ತುಹೋದಳಂತೆ!''

ಎಂದು ಪ್ರಚುರವಾಗಿತ್ತು. ನನ್ನ ಮೈ ಗಡಗಡನೆ ನಡುಗಿತು. ನಾಲಿಗೆಯೊಣಗಿತು. ತಲೆ ತಿರುಗಿತು.

* * * * *

ನನ್ನ ಮುದ್ದುಗುವರಿ ಪದ್ಮಳಿಗೆ ವಿಪರೀತವಾದ ಖಾಯಿಲೆ. ಡಾಕ್ಟರು ಅದೇತಾನೇ ಬಂದು ಮಗುವನ್ನು ನೋಡಿ, ಮಗುವು ಇನ್ನು ಬದುಕುವುದು ಕಷ್ಟವೆಂದು ಹೇಳಿ ಹೋದರು. ನನ್ನ ವೇದನೆಗಂತೂ ಕೊನೆಮೊದಲೇ ಇಲ್ಲದಂತಾಯಿತು. ಅವರು ಅದಾವುದೋ ಒಂದು ಔಷಧಿಯನ್ನು ತರಲು ಅವಸರವಾಗಿ ಮೋಟಾರನ್ನು ಓಡಿಸಿಕೊಂಡು ಹೊರಟುಹೋದರು. ನನ್ನ ಬಂಗಾರ ಪದ್ಮಳು ಕಣ್ಣನ್ನು ತೆರೆದಳು. ''ಅಮ್ಮಾ'' ಎಂದು ಕ್ಷೀಣಸ್ವರದಲ್ಲಿ ಕರೆದಳು. ''ಏನೇ ಚಿನ್ನಾ'' ಎಂದು ಮೃದುವಾಗಿ ಪ್ರಶ್ನಿಸಿದೆ. ನನ್ನ ಕಣ್ಣುಗಳಿಂದ ಕಣ್ಣೀರು ಚಿಮ್ಮಿ ಹೊರ ಹೊಮ್ಮಿತು. ಮಗುವು ''ಅಮ್ಮಾ....ನನಗೆ....ಏಕೆ ಇಷ್ಟೊಂದು ಜ್ವರ ಗೊತ್ತೇ? ನೀನು ಬನಪಿಗೆ (ಕೆಂಪಿಯ ಮಗಳು) ಹಸುರು ಲಂಗ ಕೊಂಡುಕೊಡೋಲ್ಲಾ ಎಂದೆಯಲ್ಲಾ, ಅದರಿಂದಲೇ, ಇಗೋ, ನಾನು ದೇವರಹತ್ತಿರ ಹೋಗುತ್ತೇನೆ....ನನ್ನ ಲಂಗವನ್ನಾದರೂ....ಬನಪಿಗೆ ....ಅಯ್ಯೋ ಅಮ್ಮಾ....'' ಮಗುವು ಪ್ರಾಣಬಿಟ್ಟಳು. ''ನನ್ನ ಕಂದಾ ಪದ್ಮಾ ಪದ್ಮಾ.. .....'' ಎಂದು ಹಲುಬುತ್ತಾ ಕಣ್ಣೀರು ಸುರಿಸುತ್ತಾ ಮಗುವನ್ನು ಬಾಚಿ ತಬ್ಬಿಕೊಳ್ಳಲು ಹೋದೆ, ಆಗ ನನಗೆ ಜೊಂಪಿನಿಂದ ಅರಿವುಂಟಾಯಿತು. ಬೀದಿಯ ಕಡೆಯಿಂದ ಪದ್ಮಳು ''ಏನಮ್ಮಾ ಕರೆದೆ? ಯಾಕಷ್ಟು ಗಟ್ಟಿಯಾಗಿ ಕಿರಿಚಿಕೊಂಡೆ'' ಎಂದು ಓಡಿಬಂದು ನಿಂತಳು. ನಾನು ನನ್ನ ಕೈಗಳನ್ನು ಚಾಚಿಕೊಂಡಂತೆಯೇ ನಿಜವಾಗಿಯೂ ನನ್ನ ಬಂಗಾರವು ನನ್ನಿದಿರಿನಲ್ಲಿ ನಿಂತಿರುವಳೇ ಎಂದು ಅವಳನ್ನು ದಿಟ್ಟಿಸಿ ನೋಡಿದೆ. ''ಅಮ್ಮಾ, ಹಾಗೆ ನೋಡಬೇಡಾಮ್ಮಾ,

ನನಗೆ ಭಯವಾಗುತ್ತೆ'' ಎಂದು ಓಡಿಬಂದು ನನ್ನ ಮಡಿಲಮೇಲೆ ಕುಳಿತಳು ನನ್ನ ಮುದ್ದು ಗಿಣಿ. ಅದರ ಬಳಿಕವೇ ನನಗೆ ಸಂಪೂರ್ಣವಾದ ಅರಿವುಂಟಾಯಿತು. ಮಗುವನ್ನು ಬಾಚಿ ತಬ್ಬಿಕೊಂಡು ಮುದ್ದಿಟ್ಟುಕೊಂಡು ''ಚಿನ್ನಾ, ಓಡಿಹೋಗಿ ಸಿದ್ದನಿಗೆ ಹೇಳಿ ಕೆಂಪಿಯನ್ನು ಕರೆತರ ಹೇಳು. ಬಸವಿಗೊಂದು ಹಸುರು ಲಂಗ ಕೊಂಡುಕೊಟ್ಟುಬಿಡೋಣ. ಡ್ರೈವರ್ ಬಂದನೇ ನೋಡು'' ಎಂದು ಗದ್ಗದ ಸ್ವರವಲ್ಲಿ ಅಂದೆ.

''ಅಮ್ಮಾ....ಮತ್ತೆ....ಮತ್ತೆ, ನೀನು ಕೋಪಿಸಿಕೋಲ್ಲಾ ತಾನೇ....'' ಎಂದು ಹಿಂಜರಿಯುತ್ತಾ ಮಗುವು ಮುದ್ದುಮುದ್ದಾಗಿ ತಲೆಯನ್ನು ಚಾಚಿಕೊಂಡು ಕೇಳಿದಳು.

''ನಾನು ನಿನ್ನನ್ನು ಕೋಪಿಸಿಕೊಳ್ಳುವುದೇ ಇಲ್ಲವಲ್ಲಾ, ನಿಜ ಹೇಳಿದರೆ....'' ಎಂದೆ.

''ಮತ್ತೆ....ಮತ್ತೆ ನಿನಗೆ ತಿಳಿಯದಂತೆ ಬೀದಿಗೆ ಹೋಗಿ ನನ್ನ ಹಸುರು ಲಂಗವನ್ನು ಕೆಂಪಿಗೆ ಕೊಟ್ಟುಬಿಟ್ಟೆ. ಪಾಪ....ಬಸವೀಗೆ ಆ ಲಂಗವೆಂದರೆ ಬಹಳ ಆಸೆ. ಅಮ್ಮಾ ಅದನ್ನು ನಾನು ಉಟ್ಟುಕೊಂಡಾಗೆಲ್ಲಾ ಅವಳು ಅದನ್ನು ಮುಟ್ಟಿ ಮುಟ್ಟಿ ನೋಡುವಳು. ''ಚಿಕ್ಕವ್ವಾ! ಇದು ಏಟೊಂದು ಚೆನ್ನಾಗೈತೆ! ನನಗೂ ಒಂದು ಇದೇ ತರದ ಲಂಗ ಬೇಕೂಂತ ಆಸೆಯಾಗೈತೆ'' ಎನ್ನುತ್ತಿದ್ದು. ಪಾಪ! ಅವಳಿಗೆ ಬಹಳ ಜ್ವರವಾಗಿತ್ತಂತಲ್ಲಾ. ಅದನ್ನ ಅವಳೇ ಇಟ್ಟುಕೊಳ್ಳಲಿ, ನನಗೆ ಬೇರೊಂದು ಹೊಲಿಸಿ ಕೊಟ್ಟುಬಿಡು.''

ಮಗುವಿನ ತೊದಲುನುಡಿ ಪ್ರತಿಯೊಂದೂ ನನ್ನ ಕರುಳನ್ನು ಕರಗಿಸಿತು. ಆ ಅರಿಯದ ಬಾಲಕಿಯ ಪುಟಾಣಿ ಹೃದಯದಲ್ಲಿ ಅದೆಷ್ಟೊಂದು ಕರುಣೆ ತುಂಬಿ ತುಳುಕುತ್ತಲಿದೆ! ಅವಳ ಮುಂದೆ ನಾನು ಒಂದು ಹುಳುವಿನ ಸಮಾನಳಾದೆ.

''ಚಿನ್ನಾ ಹಾಗೆಯೇ ಆಗಲಿ. ಅದನ್ನು ಅವಳೇ ಇಟ್ಟುಕೊಳ್ಳಲಿ. ಅದು ಹಳೆಯದಾಗಿಬಿಟ್ಟಿತಲ್ಲವೇ? ಅದರಂತೆಯೇ ಇನ್ನೂ ಎರಡು ಹೊಸ ಲಂಗ ಕೊಂಡು, ನಿನಗೊಂದು ಬಸವಿಗೊಂದು ಹೊಲಿಸಿಕೊಡುತ್ತೇನೆ! ಸರಿಯೇ?'' ಎಂದೆ.

ಮಗುವು ಆಶ್ಚರ್ಯದಿಂದಲೂ, ಆನಂದದಿಂದಲೂ, ಕಣ್ಣುಗಳನ್ನು ವಿಶಾಲವಾಗಿ ಅರಳಿಸಿ "ಆಗಲೆಂದು" ತಲೆಯಾಡಿಸಿದಳು. ಅಷ್ಟರೊಳಗಾಗಿ ಕೆಂಪಿ ಪದ್ಮಳ ಹಸುರು ಲಂಗದ ಜತೆಗೆ ಬಂದು, "ಅವ್ವಾ, ಚಿಕ್ಕಮ್ಮಾವ್ರು ಇದನ್ನು ತಂದುಕೊಟ್ಟವ್ರೆ, ಬಸ್ವೀಗೆ ಕೊಡೂಂತ!" ಎಂದು ಹೇಳಿ, ಹಲ್ಲುಬಿಡುತ್ತಾ ಲಂಗವನ್ನು ತಂದು ನನ್ನ ಮುಂದಿಟ್ಟು ಮಗುವಿನ ಗಲ್ಲವನ್ನು ಸವರಿ ನೆಟಿಕೆ ಮುರಿದಳು.

ನಾನು ಸೊಂಟದಲ್ಲಿ ಸಿಕ್ಕಿಸಿಕೊಂಡಿದ್ದ ರೂಪಾಯಿ ನೋಟನ್ನು ತೆಗೆದು ಲಂಗದಮೇಲಿಟ್ಟು "ಇಕೋ ಕೆಂಪಿ, ರೂಪಾಯಿ, ಲಂಗ ಎರಡೂ ತೆಗೆದುಕೊ. ನೀನು ಸಾಲವನ್ನೇನೂ ತೀರಿಸಬೇಕಾಗಿಲ್ಲ. ನೀನೇ ಮಡುಗಿಕೋ" ಎಂದೆ. ಅವಳು ಆಶ್ಚರ್ಯದಿಂದ ಹಾಗೇ ನಿಂತುಬಿಟ್ಟು ದರಲ್ಲಿ ಆಶ್ಚರ್ಯವೇನೂ ಇಲ್ಲವಲ್ಲ!

---

# ಮಗುವಿನ ಕೊರಗು

ತಾಯಿ ಆದರದೊಡನೆ ಬಡಿಸಿದಳು. ತಂದೆಯೂ ಮಗಳೂ ಊಟಮಾಡಿ ಎದ್ದು ಕೈ ತೊಳೆದುಕೊಂಡರು. ತಂದೆಯು ಉಡುಪನ್ನು ಬದಲಾಯಿಸಿಕೊಂಡು ಕಛೇರಿಗೆ ಹೊರಟರು. ಮಗಳು ತನ್ನ ಪುಟಾಣಿ ಕೈಯಲ್ಲಿ ಪುಟ್ಟದೊಂದು ಸ್ಲೇಟನ್ನೂ ಮುರಿದುಹೋದ ಬಳಪವೊಂದನ್ನೂ ತೆಗೆದುಕೊಂಡು ಪಾಠಶಾಲೆಗೆ ಹೊರಟಳು. ಅಮ್ಮನಾದ ಯಶೋದೆಯು ಅಂಗಳದಲ್ಲಿ ಬಿಟ್ಟಿದ್ದ ಹೂಗಳನ್ನು ಬೇಗನೆ ಕೊಯ್ದು ತಂದು ಅಂದವಾಗಿ ಕಟ್ಟಿ ತನ್ನ ಮುದ್ದುಗುಮಾರಿಯ ಉದ್ದನಾದ ಜಡೆಯಲ್ಲಿ ಮುಡಿಸಿದಳು.

ಆಗ ಆ ಪುಟ್ಟ ಬಾಲಕಿಯು "ಅಣ್ಣಯ್ಯಾ! ಇಂದು ಬೊಂಬೆ ಕೊಂಡುಕೊಳ್ಳಲು ದುಡ್ಡು ತರುತ್ತೀಯಾ?" ಎಂದು ಅಪ್ಪನ ಕಾಲನ್ನು ಹೋಗಿ ತಬ್ಬಿಕೊಂಡು ಕೇಳಿದಳು.

ತಂದೆ ರವಿಯು "ಊಂ...." ಎಂದು ದೀರ್ಘವಾಗಿ ಎಳೆದನು. ಬಾಲಕಿಯ ವದನವು ಪುಳಕಿತದೊಡನೆ ಅರಳಿತು. "ಜಿಂಗ್" ಎಂದು ಚಿಮ್ಮುತ್ತಾ ಅಮ್ಮನಹತ್ತಿರ ಹಾರಿಬಂದು "ಅಮ್ಮಾ, ಅಣ್ಣಯ್ಯನಿಂದು ದುಡ್ಡು ತರುತ್ತಾರಂತೆ. ನಾನು ಈ ಸಾರಿ ತುಂಬಾ ಮೆಟ್ಟಲುಗಳು ಬೊಂಬೆ ಇಡುತ್ತೇನೆ. ನನ್ನ ಸ್ಕೂಲು ಸಂಗಾತಿಯರನ್ನೆಲ್ಲಾ ಬೊಂಬೆ ಆರತಿಗೆ ಕರೆಯುತ್ತೇನೆ. ದಿನವೂ ಒಂದೊಂದು ತರದ ಬಾಗಿನ ಮಾಡಿ ಕೊಡಬೇಕಮ್ಮಾ" ಎಂದಳು.

ಯಶೋದೆಯು "ಆಗಲಿ, ಆಗಲಿ, ತಾಯಿ. ಸ್ಕೂಲಿಗೆ ಹೊತ್ತು ಮೀರಿತು. ಹೊರಡೇ ಚಿನ್ನಾ" ಎಂದು ತನ್ನ ಮಗಳಿಗೆ ಕೆನ್ನೆಮೇಲೆ ಮುದ್ದಿಟ್ಟು ಪಾಠಶಾಲೆಗೆ ಕಳುಹಿಸಿಕೊಟ್ಟಳು.

ಪ್ರಮೀಳೆ ಕುಣಿಯುತ್ತಾ, ನೆಗೆದಾಡುತ್ತಾ ಪಾಠಶಾಲೆಗೆ ಹೋಗುವ ದಾರಿಯುದ್ದಕ್ಕೂ ತನ್ನ ಸಂಗಾತಿಯರೊಡನೆ "ಈ ಸಾರಿ ನಾನು ಹತ್ತು ಮೆಟ್ಟಲುಗಳು ಬೊಂಬೆ ಇಡುತ್ತೇನೆ; ನಿಮ್ಮನ್ನೆಲ್ಲಾ ಅರಸಿನ ಕುಂಕುಮಕ್ಕೆ

ಕರೆಯುತ್ತೇನೆ. ನಮ್ಮಮ್ಮನು ದಿನಕ್ಕೊಂದು ತರಹದ ಬಾಗಿನಗಳನ್ನು ಮಾಡಿಕೊಡುತ್ತಾಳಂತೆ'' ಎಂದು ಜಂಭಕೊಚ್ಚಿಕೊಂಡಳು.

ನವರಾತ್ರಿಯು ಸಮಾಪಿಸುತ್ತಾ ಬಂದಿತು. ಇನ್ನೇನು ಈ ವಾರದೊಳಗಾಗಿ ಪಾಠಶಾಲೆಗಳನ್ನು ಮುಚ್ಚಿಬಿಡುತ್ತಾರೆ. ರಸ್ತೆಯಲ್ಲಿಲ್ಲಿಯೂ ಬೊಂಬೆಗಳನ್ನು ಮಾರುವವರೂ, ಅವರ ಸುತ್ತಲೂ ಜೇನಿಗೆ ನೊಣಗಳು ಮುತ್ತುವಂತೆ ಬೊಂಬೆಗಳ ರಸಿಕರಾದ ಚಿಕ್ಕ ಪುಟ್ಟ ಮಕ್ಕಳುಗಳ ಗುಂಪುಗಳೂ ಕೂಡುತ್ತಲಿದ್ದರು. ಪ್ರಮಿಳೆ ಪಾಠಶಾಲೆಗೆ ಅಂಗಡಿ ಬೀದಿಯನ್ನು ಹಾದುಕೊಂಡೇ ಹೋಗಬೇಕಾಗಿತ್ತು. ನವರಾತ್ರಿ ಸಮಾಪಿಸಿದುದರಿಂದ ಪಾಠಶಾಲೆಗೆ ಹೋಗುವ ದಾರಿಯುದ್ದಕ್ಕೂ ಅಂಗಡಿಗಳೆಲ್ಲವೂ ಬಣ್ಣಬಣ್ಣದ ಸುಂದರವಾದ ಬೊಂಬೆಗಳಿಂದ ತುಂಬಿ ತುಳುಕುತ್ತಿದ್ದವು. ಗೋವರ್ಧನಧರ, ಕಾಳಿಂಗಮರ್ದನ, ಯಶೋದೆ ಕೃಷ್ಣ, ದಶಾವತಾರ, ಶ್ರೀರಾಮ ಪಟ್ಟಾಭಿಷೇಕ, ಜಟಾಯು ಮರಣ, ಓಲಗದ ಸೆಟ್ ಎಂದು ಇನ್ನೂ ಎಷ್ಟೆಷ್ಟೋ ಬೊಂಬೆಗಳು. ಪ್ರಮಿಳೆಯೂ ಅವಳ ಒಡನಾಡಿಗಳೂ ಪಾಠಶಾಲೆಗೆ ಹೋಗುವಾಗಲೂ, ಅಲ್ಲಿಂದ ಹಿಂದಿರುಗುವಾಗಲೂ ಈ ಅಂಗಡಿಗಳನ್ನೊಂದೊಂದನ್ನಾಗಿ ನೋಡಿ ಆನಂದಿಸುತ್ತಾ ಹೋಗುವುದು ವಾಡಿಕೆ. ಪ್ರಮಿಳೆಯ ಸ್ನೇಹಿತೆಯರೊಬ್ಬೊಬ್ಬರೂ "ನಮ್ಮ ಮನೆಯಲ್ಲಿ ಈ ಸಾರಿ ಮೂವತ್ತು ಮೆಟ್ಟಲುಗಳನ್ನಿಡುತ್ತಾರೆ'', "ನಮ್ಮ ಮನೆಯಲ್ಲಿ ನಲವತ್ತು ಮೆಟ್ಟಲುಗಳಿಡುತ್ತಾರೆ'', "ನಮ್ಮ ಮನೆಯಲ್ಲಂತೂ ಈ ಸಾರಿ ನೂರು ರೂಪಾಯಿನಷ್ಟು ಬೊಂಬೆಗಳನ್ನು ಹೊಸದಾಗಿ ಕೊಂಡು ತಂದಿದ್ದಾರೆ'', "ನಮ್ಮ ಮನೆಯಲ್ಲಿ ಕಾನ್‌ಬಂಗಲೆ (Zoo), ಲಾಲ್‌ಬಾಗ್, ಬೆಟ್ಟ, ಹಳ್ಳಿ ಎಲ್ಲವೂ ಮಾಡುತ್ತೇವೆ'' ಎಂದು ಜಂಭ ಕೊಚ್ಚಿಕೊಳ್ಳುವರು. ತಿಂಗಳಿಗೆ 300 ರೂಪಾಯಿ 500 ರೂಪಾಯಿಗಟ್ಲೆ ಸಂಪಾದಿಸುವವರ ಹುಡುಗಿಯರ ಡಾಂಭೀಕ ವಾರ್ತೆಗಳನ್ನು ಕೇಳಿ, ಪ್ರತಿ ತಿಂಗಳೂ ಇಪ್ಪತ್ತು ರೂಪಾಯಿಗಳು ಸಂಬಳ ತೆಗೆಯುವ ಗುಮಾಸ್ತನ ಮಗಳಾದ ಪ್ರಮಿಳೆಯ ಹೃದಯವು ವೇದನೆಯಿಂದ ಕಲಕುತ್ತಿತ್ತು. ತಾನು ಈ ಸಾರಿ ಹೇಗಾದರೂ ಮಾಡಿ ಕಡೆಯ ಪಕ್ಷ ಹತ್ತು ಮೆಟ್ಟಲುಗಳಾದರೂ ಬೊಂಬೆ ಜೋಡಿಸಬೇಕೆಂದು ನಿರ್ಧರಿಸಿಕೊಂಡಳು ಆ ಬಾಲೆ.

ಅದೇ ರೀತಿಯಾಗಿ ಪ್ರತಿನಿತ್ಯವೂ ಬಂದು ತಾಯಿಯನ್ನು ಬೊಂಬೆ ಕೊಂಡುಕೊಡೆಂದು ಪೀಡಿಸತೊಡಗಿದಳು. ಆ ದೀನ ಮಾತೆ ತಾನೇ ಏನುಮಾಡಿಯಾಳು? ಮೆಲ್ಲಗೆ ತಂದೆಯನ್ನು ಕೇಳುವಂತೆ ತೋರಿಸಿ ಕೊಟ್ಟಳು. ಪ್ರಮಿಳೆಯ ಹತ್ತಿರವಿದ್ದ ಬೊಂಬೆಗಳೆಂದರೆ ಕೈಕಾಲುಗಳು ಮುರಿದುಹೋದ ಎರಡು ಕರ್ಪೂರದ (Celluloid) ಬೊಂಬೆಗಳು, ಐದಾರು ಹರಿದುಹೋದ ರಟ್ಟಿನ ಪೆಟ್ಟಿಗೆಗಳು, ಮುರಿದುಹೋದ ಬಳೆಯ ಚೂರುಗಳು ಒಂದು ಹಿಡಿ, ಸಂಕ್ರಾಂತಿಯ ಹಬ್ಬದಲ್ಲಿ ಅವರಿವರ ಮನೆಗಳಿಂದ ಎಳ್ಳಿನೊಡನೆ ಬೀರಿದ್ದ ಕುಡಿಕೆಗಳು, ಅವುಗಳೂ ಕತ್ತು ಮುರಿದು, ಬಣ್ಣಹೋಗಿ ಮೂಲೆಗೆ ಬಿದ್ದಿದ್ದವು. ಅವಿಷ್ಟನ್ನು ಮಾತ್ರ ಮಡಗಿದರೆ ಎರಡು ಮೆಟ್ಟಲುಗಳು ಕೂಡ ತುಂಬಲಾರವಲ್ಲ! ಜೊತೆಗಿಷ್ಟು ಒಳ್ಳೆಯ ಗೊಂಬೆಗಳನ್ನು ಕೊಂಡಿಡಬೇಕೆಂದು ಆ ಮಗುವಿಗೆ ಆಶೆ. ಅಮ್ಮನ ಉಪದೇಶದಂತೆ ತಂದೆಯ ಹತ್ತಿರ ಬಂದು "ಅಣ್ಣಯ್ಯಾ, ನನಗೆ ಗೊಂಬೆ ಬೇಕಲ್ಲಾ! ಕೊಂಡುಕೊಡುತ್ತೀಯಾ?" ಎಂದು ಕೇಳಿದಳು.

"ಆಗಲಿ ತಾಯಿ, ಬೊಂಬೆ ಯಾತಕ್ಕೇ? ನಿನ್ನ ಹತ್ತಿರ ಆಡುವುದಕ್ಕೆ ಇವೆಯಲ್ಲಾ?"

"ಊಂ....ಹೂಂ....ಇವೆಲ್ಲಾ ಚೆನ್ನಾಗಿಲ್ಲ. ಅಂಗಡಿ ಬೀದಿಯಲ್ಲಿ ಒಳ್ಳೇ ಬೊಂಬೆಗಳಿವೆ. ಅವು ಬೇಕು ನನಗೆ, ಮೆಟ್ಟಲುಗಳಲ್ಲಿ ಇಡೋಕೆ."

"ಅವುಗಳನ್ನು ಕೊಂಡು ತರಬೇಕಾದರೆ ತುಂಬಾ ದುಡ್ಡು ಬೇಕಲ್ಲಾ. ದುಡ್ಡಿಗೆ ನಾನೆಲ್ಲೀ ಹೋಗಲಿ ಪುಮ್ಮಿ?"

"ಆಫೀಸಿನಿಂದ ತಾ."

"ಆಗಲಿ" ಎಂದು ಹೇಳಿ, ರಾಯರು ಕಛೇರಿಗೆ ಹೊರಟನು. ಅಂದೆಲ್ಲಾ ಪ್ರಮಿಳೆಗೆ ಆಟವೋ ಪಾಠವೋ ಏನೊಂದೂ ಓಡಲಿಲ್ಲ. ಪಾಠಶಾಲೆಯಿಂದ ಬಂದವಳು ಶೀಘ್ರವಾಗಿ ಅಮ್ಮನು ಕೊಟ್ಟ ತಿಂಡಿಯನ್ನು ತಿಂದು, ಕೈತೊಳೆದುಕೊಂಡು ಅವರ ಮನೆಯ ರಸ್ತೆಯ ಕೊನೆಯಲ್ಲಿರುವ ಬಸ್‌ಸ್ಟ್ಯಾಂಡಿನಲ್ಲಿ ಬಂದು ಹಾಜರಾದಳು. ಆ ಸ್ಟ್ಯಾಂಡಿನಲ್ಲೇ

ಅವರ ತಂದೆ ಕಛೇರಿಯಿಂದ ಬಂದಿಳಿಯುವ ವಾಡಿಕೆ. ತಂದೆ ಬಸ್ಸಿನಿಂದ ಇಳಿದುಬಂದೊಡನೆಯೇ "ಅಣ್ಣಯ್ಯಾ, ದುಡ್ಡು ತಂದೆಯಾ? ಬಾ, ಬೊಂಬೆಯ ಅಂಗಡಿಗೆ ಹೋಗೋಣ" ಎಂದು ತಂದೆಯ ಕೈಯನ್ನು ಹಿಡಿದೆಳೆದಳು, ಬಾಳಿನ ಕಹಿ ಸಿಹಿ ಒಂದೂ ಅರಿಯದ ಆ ಎಳೆಯ ಬಾಲಕಿ.

"ಅಯ್ಯಯ್ಯೋ, ನಾನೆಂತಹ ದಡ್ಡ? ತರಲು ಮರತೇಬಿಟ್ಟೆನಲ್ಲಾ! ನಾಳೆಯ ದಿನ ಖಂಡಿತ ದುಡ್ಡು ತರುತ್ತೇನೆ ಪುಮ್ಮಿ" ಎಂದನು ರವಿ.

ಪ್ರಮಿಳೆಯ ಮುಖ ತಕ್ಷಣ ಕುಗ್ಗಿಹೋಯಿತು. "ಹೂಂ...." ಎನ್ನುತ್ತಾ ನಿಟ್ಟುಸಿರುಬಿಟ್ಟಳು. ರವಿಯು ಆ ಎಳೆಯ ಕೂಸಿನ ಹತ್ತಿರದಲ್ಲಿ ಹೇಗೆ ನಿಜವನ್ನು ಹೇಳಲಾಗುವುದು? ತಿಂಗಳ ಮಧ್ಯಭಾಗದಲ್ಲಿ ಯಾವ ಕಛೇರಿಯಲ್ಲಿ ತಾನೇ ಸಂಬಳ ಕೊಡುವರು? ಒಬ್ಬಿಬ್ಬರು ಸ್ನೇಹಿತರ ಹತ್ತಿರದಲ್ಲಿ ನಾಚುತ್ತಾ ನಾಚುತ್ತಾ ಐದು ರೂಪಾಯಿಯ ಸಾಲವನ್ನು ಕೇಳಿ ನೋಡಿದನು. ಕೊಡುವವರಂತೂ ಯಾರೂ ಇಲ್ಲ. ಕೊನೆಗೆ ಕಛೇರಿಯ ಸೇವಕನನ್ನು ಸಹ ಕೇಳಿ ನೋಡಿದುದಾಯಿತು. ನಾಳೆಯ ದಿನ ನಾಲ್ಕಾಣೆಯ ಸಾಲ ಎಲ್ಲಿ ಹುಟ್ಟುವುದು ಎಂದು ಅರಿಯದವನಾದ ರವಿಯು ಹಳೆಯ ಪಲ್ಲವಿಯನ್ನೇ ಹಾಡಿ ಆ ಬಾಲಕಿಗೆ ನಂಬಿಕೆ ಹುಟ್ಟಿಸಿ ಸಂತೈಸಿದನು.

ಮೂರನೇಯ ದಿನವೂ ಪ್ರಮಿಳೆ ಬೆಳಿಗ್ಗೆ ಊಟವಾದ ತಕ್ಷಣ ತಂದೆಗೆ ಆಫೀಸಿನಿಂದ ಹಣ ತರಬೇಕೆಂದು ಜ್ಞಾಪಕ ಪಡಿಸಿದಳು. ಅವನೂ "ಹೂಂ ೦ ೦...." ಎಂದು ಉತ್ತರವಿತ್ತನು. ಅಂದಿನ ಸಂಜೆಯೂ ಹಿಂದಿನ ದಿನದಂತೆಯೇ ತಂದೆಯ ಬರುವಿಕೆಯನ್ನು ನಿರೀಕ್ಷಿಸುತ್ತಾ ಬಸ್ ಸ್ಟ್ಯಾಂಡಿನಲ್ಲಿ ಬಂದು ನಿಂತಳು ಬಾಲೆ. "ಇಂದು ಖಂಡಿತ ಅಣ್ಣಯ್ಯನು ದುಡ್ಡು ತರುವರು, ಸಂಶಯಪಡಬೇಕಾದದ್ದಿಲ್ಲ" ಎಂದು ಪರ್ಯಾಲೋಚಿಸುತ್ತಾ ನಿಂತಿದ್ದವಳು ತಂದೆಯನ್ನು ಕಂಡೊಡನೆಯೇ ಓಡಿಹೋಗಿ ಅಪ್ಪನನ್ನು ಅಪ್ಪಿಕೊಂಡು "ಅಣ್ಣಯ್ಯಾ, ದುಡ್ಡು ತಂದೆಯಾ? ಅಂಗಡಿಗೆ ಹೋಗೋಣವೇ?" ಎಂದು ಮೃದುಮಧುರವಾದ ಕಂಠದಲ್ಲಿ ಮುದ್ದುಮುದ್ದಾಗಿ ನುಡಿದಳು. ಆಶೆ ಮತ್ತು ನಂಬಿಕೆಯಿಂದ ತುಂಬಿದ್ದ

ಆ ಮಗುವಿನ ತೊದಲ್ನುಡಿಯನ್ನು ಕೇಳಿ ರವಿಯ ಕಣ್ಣುಗಳಲ್ಲಿ ನೀರು ಬಂತು. ಜೇಬನ್ನು ಮುಟ್ಟಿನೋಡಿ "ಅಮ್ಮಾ ದುಡ್ಡು ತಂದಿದ್ದೆ. ಅದೆಲ್ಲಿಯೋ ದಾರಿಯಲ್ಲಿ ಬಿದ್ದು ಕಳೆದುಹೋಯಿತು. ನಾಳೆಯ ದಿನ ಖಂಡಿತ ತರುತ್ತೇನೆ" ಎಂದು ಹೇಳಿ ಮಗುವನ್ನು ಬಾಚಿ ಮುದ್ದಿಟ್ಟುಕೊಂಡನು. ಅಷ್ಟಲ್ಲದೆ ಆ ದೀನ ತಂದೆಗೆ ತನ್ನ ವಾತ್ಸಲ್ಯವನ್ನು ಬೇರೆ ಯಾವ ರೀತಿಯಲ್ಲಿ ತೋರಿಸಲು ಸಾಧ್ಯ?

ಮಾರನೆಯ ದಿನವಂತೂ ರವಿಯು ಕಛೇರಿಯಲ್ಲಿ ಪ್ರತಿ ಸ್ನೇಹಿತನನ್ನೂ ಸಾಲಕ್ಕಾಗಿ ಅಂಗಲಾಚಿ ಬೇಡಿದನು. ನಿತ್ಯವೂ ನೆಪ ಹೇಳಿ ಕಳುಹಿಸಲಾರದೆ ಅವನನ್ನು ಕಂಡು ಮನಕರಗಿದವರಾದ ಒಬ್ಬಿಬ್ಬರು ಸ್ನೇಹಿತರು ಒಬ್ಬನು ನಾಲ್ಕಾಣೆ, ಒಬ್ಬನು ಎಂಟಾಣೆ, ಒಬ್ಬನು ಆರಾಣೆ ಹೀಗೆ ಕೊಟ್ಟರು. ಮಿಕ್ಕವರು ಕೈಯನ್ನು ತೆರೆದುಬಿಟ್ಟರು. ಹಾಗೂ ಹೀಗೂ ತನ್ನ ಕುಲದೀಪಕ್ಕಾಗಿ, ತನ್ನ ಮತ್ತು ತನ್ನ ಮಡದಿಯ ಪ್ರೇಮವೆಂಬ ವೃಕ್ಷದಲ್ಲಿ ಉದಿಸಿದ ಅತಿ ಮಧುರವಾದ ಫಲಕ್ಕಾಗಿ, ತನ್ನ ಕಣ್ಮಣಿಗಾಗಿ, ತನ್ನ ಪ್ರಾಣಪದಕವಾದ ಪ್ರಮೀಳೆಗಾಗಿ ವಿಶ್ವಪ್ರಯತ್ನಪಟ್ಟು ೩ ರೂ.ಗಳವರೆವಿಗೆ ಶೇಖರಿಸಿಕೊಂಡು ಪ್ರಫುಲ್ಲವದನನಾಗಿ ಮನೆಗೆ ಹಿಂದಿರುಗಿದನು ರವಿ.

"ಮಗುವನ್ನೇ ಅಂಗಡಿಗೆ ಕರೆದುಕೊಂಡುಹೋಗಿ ಅವಳಿಗೆ ಬೇಕಾದ ಬೊಂಬೆಗಳನ್ನು ಆರಿಸಿಕೊಳ್ಳಲು ಹೇಳಿದರೆ, ಆಗ ಅವಳ ಮುಖವು ಹೇಗೆ ಅರಳಿ ಬೆಳಗುವುದೆಂಬುದನ್ನು ಭಾವಿಸುತ್ತಾ ಬಸ್ಸನ್ನು ಹತ್ತಿದನು.

ಯಥಾಪ್ರಕಾರ ಪ್ರಮೀಳೆಯು ಬಸ್‌ಸ್ಟ್ಯಾಂಡಿನಲ್ಲಿ ತಂದೆಗಾಗಿ ಕಾದುಕೊಂಡು ನಿಂತಿದ್ದಳು. ಅವಳ ತಂದೆ ಅವಳನ್ನು ಬಾಚಿ ಮುದ್ದಿಟ್ಟುಕೊಂಡು ಅಂಗಡಿಗೆ ಕರೆದುಕೊಂಡುಹೋದನು. "ನಿನಗೆ ಇಷ್ಟವಾದುದನ್ನು ಆರಿಸಿಕೊ" ಎಂದು ರವಿಯು ಹೇಳಲು, ಪುಟ್ಟಿಯ ಕಣ್ಣುಗಳು ಆನಂದದಿಂದ ಕುಣಿದಾಡಿದುವು. ಅಧಿಕವಾದ ಸಡಗರದೊಡನೆ ಅವಳು ಬೊಂಬೆಗಳನ್ನು ಆರಿಸಿಟ್ಟಳು. ಅಂಗಡಿಯಲ್ಲಂತೂ ಅಕ್ಕಿಕಾಳು ಹಾಕಿದರೆ ಕೂಡ ಕೆಳಗೆ ಬೀಳಲಾರದಷ್ಟು ಜನರ ಗುಂಪು 'ಗಿಜಿ, ಗಿಜಿ' ಎಂದಿತ್ತು. ರವಿಯು ಜೇಬಿನಿಂದ ಚಿಲ್ಲರೆಯನ್ನು ತೆಗೆದು

ಗುಡ್ಡೆ ಹಾಕಿಕೊಂಡು, ಅಂಗಡಿಯವನಿಗೆ ಕೊಡಬೇಕಾದುದನ್ನು ಎಣಿಸ ತೊಡಗಿದನು.

"ಅಯ್ಯೋ! ಅವನ ಹಿಂದಿನಿಂದ ಯಾರೋ ಒಬ್ಬ ಪಾಪಿಷ್ಟನು "ಸರಕ್" ಎಂದು ಕೈ ಹಾಕಿ ಎಲ್ಲ ಚಿಲ್ಲರೆಯನ್ನೂ ಬಾಚಿಕೊಂಡುಬಿಟ್ಟನು. ಆ ತಂದೆಯ ಮನೋವೇದನೆಯನ್ನೂ ಆ ಪುಟ್ಟ ಬಾಲಕಿಯ ಎಳೆಯ ಹೃದಯದಲ್ಲುಂಟಾದ ವ್ಯಥೆಯನ್ನೂ ನಮ್ಮಿಂದ ವರ್ಣಿಸಲಸಾಧ್ಯ. ಎಷ್ಟು ಪ್ರಯತ್ನಪಟ್ಟರೂ ಆ ಜನಸಂದಣಿಯಲ್ಲಿ ಕಳ್ಳನಾರೆಂದು ಕಂಡು ಹಿಡಿಯುವುದು ಅಸಾಧ್ಯವಾಯಿತು. ಅವನೇ ಹುಡುಕುವವರ ಜೊತೆ ಯಲ್ಲಿ ಒಬ್ಬನಂತೆ ಸಾಮರ್ಥ್ಯವಾಗಿ ನಟಿಸುತ್ತಿರುವಾಗ ಕಳ್ಳನಾರೆಂದು ಕಂಡುಹಿಡಿಯುವುದು ಹೇಗೆ? ಪ್ರಮೀಳೆಯು ತನ್ನ ಪುಟ್ಟ ಹೃದಯದಿಂದ ಹೊಮ್ಮುತ್ತಿರುವ ಶೋಕವೆಲ್ಲವನ್ನೂ ಹೊರಗೆಡವಿ "ಗೋಳೋ" ಎಂದು ಅತಿ ಕಠಿಣವಾದ ಹೃದಯದಲ್ಲೂ ಕನಿಕರ ಹುಟ್ಟುವಂತೆ ರೋದನ ಮಾಡತೊಡಗಿದಳು. ಅಯ್ಯೋ! ಆ ಬಾಲಕಿಯ ಕೊರಗನ್ನು ಕಂಡು ಸಹಿಸಲಾರದೆ ರವಿಯು ಮಗುವಿನೊಡನೆ ಮಗುವಾಗಿ ಕಣ್ಣೀರಿಡುತ್ತಾ ಮನೆಗೆ ಹಿಂತಿರುಗಿದನು. ಆ ತಂದೆ ಮಕ್ಕಳ ಕರುಣಾಜನಕವಾದ ನೋಟವನ್ನು ಕಂಡು ಅಲ್ಲಿ ನೆರೆದಿದ್ದವರೆಲ್ಲರೂ ಮನಗರಗಿದರೆಂಬುದರಲ್ಲಿ ಏನಾಶ್ಚರ್ಯ?

ಪ್ರಮೀಳೆಯು ಅತ್ತು ಅತ್ತು ಬಳಲಿಹೋದವಳಾಗಿ ತಾಯಿಯ ಮಡಿಲಲ್ಲಿ ತಲೆಯನ್ನಿಟ್ಟು ಮಲಗಿದಳು. ಆ ಬಡ ತಾಯಿತಂದೆಯರಿಂದ ಮಗುವನ್ನು ಸಂತೈಸಲಾಗದೇ ಹೋಯಿತು. ಆಗ ಯಾರೋ ಅವರ ಮನೆಯ ಬೀದಿಯ ಬಾಗಿಲ ಹತ್ತಿರದಲ್ಲಿ ಬಂದು "ಸಾರ್, ಸಾರ್" ಎಂದು ಕರೆದಂತಾಯಿತು. ಹೋಗಿ ನೋಡಲಾಗಿ ಕೂಗಿದ ಮನುಷ್ಯನು ಅಷ್ಟರೊಳಗೆ ಅದೃಶ್ಯನಾಗಿದ್ದನು. ಹೊಸಲ ಹತ್ತಿರದಲ್ಲಿ ದೊಡ್ಡದೊಂದು ಬುಟ್ಟಿ ಇತ್ತು. ಅದನ್ನು ಬಿಚ್ಚಿ ನೋಡುವುದೇ ಬೇಡವೇ ಎಂದು ದಂಪತಿಗಳೀರ್ವರೂ ಬಹಳವಾಗಿ ಯೋಚಿಸಿ ನಂತರ ಬಿಚ್ಚಿ ನೋಡಿದರು. ಏನಾಶ್ಚರ್ಯ! ಪ್ರಮೀಳೆಯು ಬೊಂಬೆಯ ಅಂಗಡಿಯಲ್ಲಿ ಆರಿಸಿಟ್ಟದ್ದ ಬೊಂಬೆಗಳೆಲ್ಲವೂ ಆ ಬುಟ್ಟಿಯಲ್ಲಿ ಕಂಗೊಳಿಸಿದವು. ಆ ಅಂಗಡಿಯವನೇ

ನಾದರೂ ಮಗುವಿನ ಕೊರಗನ್ನು ಕಂಡು ಮನಗರಗಿ ಮಗುವಿಗೆಂದು ಇವನ್ನು ಕಳುಹಿಸಿರಬೇಕೆಂದು ರವಿಯ ಮನಸ್ಸಿಗೆ ಹೊಳೆಯಿತು. ಬುಟ್ಟಿಯ ಸಹಿತವಾಗಿ ಆ ಅಂಗಡಿಗೆ ಹೋಗಿ ಅಂಗಡಿಯವನನ್ನು ವಿಚಾರಿಸಿದನು. ಅದಕ್ಕವನು ತಾನು ಕಳುಹಿಸಲಿಲ್ಲವೆಂದನು. ಅಂಗಡಿಯಿಂದ ಮತ್ತೆ ಯಾರಾದರೂ ಇಂತಹ ಬೊಂಬೆಗಳನ್ನು ಕೊಂಡುಕೊಂಡುಹೋದರೇ ಎಂದು ರವಿಯು ವಿಚಾರಿಸಿದನು. ''ಅದೇನೋ ಬುದ್ಧಿ, ನಂಗೊತ್ತಿಲ್ಲ. ಘಳಿಗೆಗೆ ನೂರಾರು ಜನ ಬಂದು, ಕೊಂಡುಹೋಯ್ತಾಲೇ ಇರ್‍ತಾರೆ. ನನ್ಗೆ ಜ್ಞಾಪಕವಿಲ್ಲಾ ಬುದ್ಧಿ'' ಅಂದುಬಿಟ್ಟ ಅಂಗಡಿಯವ.

ಆದರೆ ರವಿಯ ಹಣವನ್ನು ಕಳವು ಮಾಡಿದ ವ್ಯಕ್ತಿಯೇ ಆ ಮಗುವಿನ ಕೊರಗನ್ನು ಕಂಡು ಮನಗರಗಿ ಬಾಲಕಿಗೆ ಪುರಸ್ಕಾರವಾಗಿ ಇವನ್ನು ಕಳುಹಿಸಿರಬಹುದೇ?

---

# ಹಣ್ಣು ಮಾರುವವಳು

ಪುಷ್ಯಮಾಸ. ಮಧ್ಯಾಹ್ನ ಸುಮಾರು ಹನ್ನೆರಡು ಘಂಟೆಯ ಸಮಯ. ರಸ್ತೆಯಲ್ಲಿ ಐದಾರು ಮಂದಿ ಬಾಲಕರು ಗೋಲಿಯಾಡುತ್ತಲಿದ್ದರು.

ಆಗ ಅದೇ ರಸ್ತೆಯಲ್ಲಿ ''ಕೊಡಗಿನ್ ಕಿತ್ತಳೆಯ ಹಣ್ಣೂ.... ಕೊಡಗಿನ ಕಿತ್ತಳೆಯ ಹಣ್ಣೂ....'' ಎಂದು ಕೂಗುತ್ತಾ ಹೋಗುತ್ತಲಿದ್ದ ಹಣ್ಣುಮಾರುವ ಮುದುಕಿಯೊಬ್ಬಳು ಆ ಮಕ್ಕಳ ಗೋಲಿಯಾಟವನ್ನು ನೋಡಿ, ಅಲ್ಲಿಯೇ ಸ್ವಲ್ಪ ಹೊತ್ತು ನಿಂತಳು. ಆ ಹುಡುಗರಲ್ಲಿ ಪೂರ್ಣಚಂದ್ರನಂತೆ ಬೆಳಗುತ್ತಲಿದ್ದ ತುಂಬುಗೆನ್ನೆಯ, ಸುಂದರವಾದ, ಐದು ವರ್ಷ ತುಂಬದ ಬಾಲಕನೊಬ್ಬನ ಕಡೆಗೆ ಆ ಮುದುಕಿಯ ದೃಷ್ಟಿ ಹರಿಯಿತು. ಆಡುತಲಿದ್ದ ಆ ಬಾಲಕನು ಸ್ವಲ್ಪ ಕತ್ತೆತ್ತಿ ನೋಡಿದನು. ಬಾಲಕನು ಹೇಗೆ ಮುದುಕಿಯ ಮನಸ್ಸನ್ನು ಸೆಳೆದನೋ ಅದೇ ರೀತಿಯಲ್ಲಿ ಆ ಕ್ಷಣ ಅವಳ ಬುಟ್ಟಿಯಲ್ಲಿ ಆಗತಾನೆ ಉದಿಸಿದ ಪುಟ್ಟ ಪುಟ್ಟ ಸೂರ್ಯರುಗಳ ಕಾಂತಿಯನ್ನು ಬೀರುವ ಕಿತ್ತಳೆಯ ಹಣ್ಣುಗಳು ಆ ಬಾಲಕನ ಮನಸ್ಸನ್ನು ಸೆಳೆದವು.

ಬಾಲಕನು ಮುದುಕಿಯನ್ನು ಕುರಿತು ''ಅಜ್ಜೀ! ಹಣ್ಣು ಎಷ್ಟು ಬೆಲೆ?'' ಎಂದನು.

ಮುದುಕಿಯು ಅಲ್ಲಿಯೇ ಪಕ್ಕದಲ್ಲಿದ್ದ ಜಗುಲಿಯಮೇಲೆ ಬುಟ್ಟಿಯನ್ನು ಇರಿಸುತ್ತಾ ''ಬಾ, ಕಂದಾ! ಅಮ್ಮನನ್ನು ಕರೆ. ಕೊಂಡು ಕೊಳ್ಳ ಹೇಳು. ಡಜನ್ ಒಂದೂವರೆ ರೂಪಾಯಿ, ಅಷ್ಟೆ. ಹಣ್ಣು ಎಷ್ಟು ಚಂದಾಗಿವೆ ನೋಡು! ಅಪರಂಜಿ ಚಿನ್ನಾನಾ ಸೋಲಿಸುತ್ತಾವೆ. ಸೂರ್ಯದೇವ್ರ ಬಣ್ಣಾ ಸೋಲಿಸುತ್ತಾವೆ. ತಿಂದ್ರೆ ಕಲ್ಲುಸಕ್ರೆಯಂಥಾ ರುಚಿ ಕಂದಾ!....'' ಎಂದಳು.

ಬಾಲಕ ''ಮೊನ್ನೆ ತಾನೇ ಅಮ್ಮನು ಒಂದು ಡಜನ್ ಹಣ್ಣು ಕೊಂಡುಕೊಟ್ಳು. ತಿರುಗಿ ಈವತ್ತು ಕೇಳಿದ್ರೆ ಬೈತಾಳೆ. ನೀನು ತೆಗೆದು

ಕೊಂಡು ಓಗು. ಅಮ್ಮಾ ನಾನ್ಕದ್ದೆನೆಂತ ತಿಳಿದ್ರೆ ಬೈದುಬಿಟ್ಟಾಳು. ಹಣ್ಣಾನ್ ನೋಡಿದ್ರೆ ಆಶೆಯಾಯ್ತು, ಅಷ್ಟೇ.”

ಮುದುಕಿ “ಪರವಾ ಇಲ್ಲ. ತೆಕೋ ಒಂದ್ಹಣ್ಣ ಕಂದಾ.. ಸುಮ್ನೇ ತಗೋ ನಿನ್ಗಾಶೆಯಾದಷ್ಟು ನನ್ಕಂದಾ” ಎಂದು ಸವಿನುಡಿ ನುಡಿಯುತ್ತಾ ತನ್ನ ಎರಡು ಕೈಗಳಿಂದಲೂ ಮಗುವಿನ ಕೆನ್ನೆಗಳನ್ನು ಸವರಿ ನೆಟಿಕೆಮುರಿದು ದೃಷ್ಟಿತೆಗೆದಳು. ಮುದುಕಿಯ ಪ್ರೀತ್ಯಾದರವನ್ನು ಕಂಡು ಬೆರಗಾಗಿ ಮಗುವಿನ ಸುಂದರವಾದ, ತಾವರೆ ಎಸಳಿನಂತಹ ಕಣ್ಣುಗಳು ಆನಂದ ದೊಡನೆ ಅರಳಿದವು. ಬುಟ್ಟಿಯಿಂದ ಒಂದು ಹಣ್ಣನ್ನು ತೆಗೆದು, ಉರುಳಿಸಿ, ಉರುಳಿಸಿ ನೋಡಿ ಸಂತೋಷದಿಂದ ನಗೆಯುತ್ತಾ ತನ್ನ ಸಂಗಡಿಗರಿಗೆ ಒಂದೊಂದು ತೊಳೆಯನ್ನು ಕೊಟ್ಟು ಮಿಕ್ಕವನ್ನು ಒಂದೊಂದು ತೊಳೆಯಾಗಿ ಚಪ್ಪರಿಸಿ ತಿನ್ನತೊಡಗಿದನು.

ಬಾಲಕನನ್ನು ಎವೆಯಿಕ್ಕದೆ ಪ್ರೇಮಪೂರಿತವಾದ ದೃಷ್ಟಿಯಿಂದ ನೋಡಲಾಗಿ ಮುದುಕಿಯ ಕಣ್ಣುಗಳಲ್ಲಿ ಕಣ್ಣೀರು ತುಂಬಿ ಹರಿಯು ಲಾರಂಭಿಸಿತು.

ಬಾಲಕನು “ಅಜ್ಜೀ ನಿನಗೂ ಮಗೂ ಇದ್ದಾನೊ ನನ್ನಂತೆ? ನನ್ನೊಡನೆ ಆಡುವುದಕ್ಕೆ ನಾಳೆ ಕರಕೊಂಡು ಬರುತ್ತೀಯಾ?” ಎಂದನು.

ಮುದುಕಿಯು ಗದ್ಗದ ಸ್ವರದಲ್ಲಿ “ನಿನ್ನಂತೆಯೇ ನನಗೂ ಒಬ್ಬ ಮಗು ಇದ್ದು ಕಂದಾ. ಎರಡೇ ದಿನ ಜೀವಕ್ಬಂದು ಸತ್ತೋದ ಕಂದಾ” ಎನ್ನುತ್ತಾ ಸೀರೆಯ ಸೆರಗಿನಿಂದ ಗಳಗಳನೇ ಸುರಿಯುವ ಕಣ್ಣೀರನ್ನು ಒರಸಿಕೊಂಡಳು.

ಬಾಲಕನು ತನ್ನ ಪುಟ್ಟ ಕೈಗಳಿಂದ ಮುದುಕಿಯ ಕೈಗಳನ್ನು ಹಿಡಿದುಕೊಂಡು “ಅಜ್ಜೀ ಅಳುತ್ತೀಯಾ?” ಎಂದು ಮುಗ್ಧಮನೋಹರವಾದ ಕಂಠದಲ್ಲಿ ನುಡಿದನು.

ಮುದುಕಿಯು ಬಾಲಕನ ಕೈಗಳನ್ನು ತನ್ನ ಕಣ್ಣುಗಳಿಗೆ ಒತ್ತಿಕೊಂಡು, ಮುದ್ದಿಟ್ಟು “ನಿನ್ನ ಹೆಸರೇನ್ಕಂದಾ?” ಎಂದು ಕೇಳಿದಳು.

“ಕೃಷ್ಣ”

ಮುದುಕಿ “ಕೃಷ್ಣ!....ಕೃಷ್ಣ! ಎಷ್ಟು ಮುದ್ದಾದ ಹೆಸರು, ಜೊತೆಗೆ ನಿನ್ನ ರಂಗಿಗೆ ತಕ್ಕಂತೆ “ಚಂದ್ರ” ಎಂದು ಇಡ್ಬೇಕು ಕಂದಾ.

ಕೃಷ್ಣ ಕಪ್ಪು. ನೀನು ಬಿಳುಪು. ಮಾಟದಲ್ಲಿ ಕೃಷ್ಣದೇವರಂತಿದೀಯ. ರಂಗಿನಲ್ಲಿ ಚಂದ್ರನನ್ನು ಸೋಲಿಸ್ತೀಯಾ, "ಕೃಷ್ಣಚಂದ್ರ ನಿನ್ಗೆ ತಕ್ಕ ಹೆಸ್ರು" ಎಂದು ಹೇಳಿದಳು. ಮಗುವಿನೊಡನೆ ಸ್ವಲ್ಪಹೊತ್ತು ಸಂಭಾಷಿಸಿದನಂತರ ಮುದುಕಿಯು ಯಥಾಪ್ರಕಾರ "ಕೊಡಗಿನ್ ಕಿತ್ಲೇಹಣ್ಣು.. ಕೊಡಗಿನ್ ಕಿತ್ಲೇಹಣ್ಣು ಬೇಕೆನ್ರಮ್ಮ..ಕೊಡಗಿನ ಕಿತ್ಲೇಹಣ್ಣು.." ಎಂದು ಕೂಗುತ್ತಾ ಹೊರಟುಹೋದಳು.

ಮಾರನೆಯ ದಿವಸವೂ ಅದೇ ಹೊತ್ತಿಗೆ ರಸ್ತೆಯಲ್ಲಿ ಆ ಗಂಭೀರ ಧ್ವನಿಯು ಕೇಳಿಬರಲು ಮನೆಯೊಳಗೆ ಆಡುತ್ತಲಿದ್ದ ಕೃಷ್ಣನು—ಮುದುಕಿಯು ಇಟ್ಟ ಮುದ್ದುಹೆಸರಿನಲ್ಲೇ ನಾವೂ ಕರೆಯೋಣ—'ಕೃಷ್ಣಚಂದ್ರನು', ಬಾಗಿಲು ತೆರೆದು ಬೀದಿಗೆ ಓಡಿಬಂದನು. ಬಾಲಕ—ಮುದುಕಿಯರಿಬ್ಬರ ನಡುವೆಯೂ ಹಿಂದಿನ ದಿನದಂತೆಯೇ ಸಂಭಾಷಣೆಯು ಸ್ವಲ್ಪಹೊತ್ತು ನಡೆಯಿತು. ಬಾಲಕನ ಕೈಯಲ್ಲೊಂದು ಕಿತ್ತಳೆಯ ಹಣ್ಣು ಬಂದು ಕೂತಿತು. ಇದೇ ರೀತಿಯಲ್ಲಿ ಅವರೀರ್ವರ ಮಧ್ಯೆ ದಿನೇ ದಿನೇ ಶುಕ್ಲಪಕ್ಷದ ಚಂದ್ರನೋಪಾದಿಯಲ್ಲಿ ಸ್ನೇಹವು ಬೆಳೆಯ ತೊಡಗಿತು. ಮುದುಕಿಗೆ ಮಗುವಿನ ಮೂಲಕವಾಗಿ ಮಗುವಿನ ತಾಯಿಯ ಪರಿಚಯವೂ ಆಯಿತು. ಮಗುವಿನ ತಾಯಿಯು ಹಣ್ಣನ್ನು ಕೊಂಡುಕೊಳ್ಳಲಿ ಕೊಳ್ಳದಿರಲಿ ಬಾಲಕನಿಗಂತೂ ಮುದುಕಿಯಿಂದ ಪ್ರತಿನಿತ್ಯವೂ ಪ್ರೇಮದ ಕಾಣಿಕೆಯಾಗಿ ಒಂದು ಕಿತ್ತಳೆಯ ಹಣ್ಣು ಸಲ್ಲುತ್ತಿತ್ತು. ಕ್ರಮೇಣ ಹಣ್ಣುಮಾರುವ ಮುದುಕಿಯು ಕೃಷ್ಣಚಂದ್ರನ ಮನೆಗೆ ಸೇರಿದವಳೇ ಆದಳು. ಕೃಷ್ಣಚಂದ್ರನಿಗೆ ಒಂದುಸಲ ಎರಡು ದಿನ ಜ್ವರ ಬಂದಾಗ, ಅವನಿಗೆ ಜ್ವರ ಇಳಿಯುವ ತನಕ ದಿವಸಕ್ಕೆ ಐದು ಸಾರಿ ಅವನ ಮನೆಗೆ ಬಂದು ಮಗುವನ್ನು ಕಂಡು, ಮಗುವಿನ ಯೋಗಕ್ಷೇಮವನ್ನು ವಿಚಾರಿಸಿಕೊಂಡು ಹೋಗುತ್ತಿದ್ದಳೆಂದರೆ, ಆ ಮುದುಕಿಯ ಹೃದಯವನ್ನು ಆ ಎಳೆಯ ತಳಿರು ಎಷ್ಟು ಮೋಹಗೊಳಿಸಿದ್ದಿತೆಂಬುದನ್ನು ವಾಚಕಮಹಾಶಯರೇ ಊಹಿಸಿಕೊಳ್ಳಬೇಕು.

*   *   *   *

ಇದೇರೀತಿ ಕೆಲವು ತಿಂಗಳು ಕಳೆದವು. ಈ ಮಧ್ಯೆ ಒಂದು ತಿಂಗಳ ಕಾಲ ಮುದುಕಿಗೆ ಮೈ ಹುಷಾರಿಲ್ಲದೆ ಹೋಗಲು ಆ ಅಲ್ಪಾವಧಿಯಲ್ಲಿ ಕೃಷ್ಣಚಂದ್ರನನ್ನು ಹೋಗಿ ಕಾಣಲಾರದೆ ಮುದುಕಿಗೆ ಹುಚ್ಚುಹಿಡಿದಂತಾಗಿಬಿಟ್ಟಿತು. ಸ್ವಲ್ಪ ಗುಣವಾದೊಡನೆಯೇ ಮೆಲ್ಲಮೆಲ್ಲಗೆ ಸವರಿಸಿಕೊಳ್ಳುತ್ತಾ ಮಗುವನ್ನು ಕಂಡುಬರಲು ಮುದುಕಿಯು ಮಗುವಿನ ಮನೆಯ ಕಡೆಗೆ ಹೊರಟಳು. ಮನೆಯ ಮುಂದೆ ಓಲಗದ ಶಬ್ದವನ್ನೂ ಜನರ ಓಡಾಟವನ್ನೂ, ತಳಿರು ತೋರಣಗಳ ಅಲಂಕಾರವನ್ನೂ ಕಂಡು ಮುದುಕಿಯ ಮೈ ಉಬ್ಬಿತು.

ಅಷ್ಟುಹೊತ್ತಿಗೆ ಒಳಗಿನಿಂದ ಏನೋ ಕಾರ್ಯದ ನಿಮಿತ್ತವಾಗಿ ಬೀದಿಗೆ ಬಂದ ಕೃಷ್ಣಚಂದ್ರನ ಮಾತೆಯಾದ ಕಮಲಮ್ಮನು ಮುದುಕಿಯನ್ನು ಕಂಡು "ಏನೇ ಮುದುಕಿ? ಇಷ್ಟುದಿನಗಳು ಎಲ್ಲಿಗೆ ಹೋಗಿದ್ದೆ? ನಮ್ಮ ಕೃಷ್ಣನು ನಿನ್ನನ್ನು ಕಾಣದೆ ಕರಕರಗಿಹೋಗುತ್ತಲಿದ್ದಾನೆ. ಬಾ ಒಳಗೆ, ಮಗುವಿಗೆ ಇಂದು ಅಕ್ಷರಾಭ್ಯಾಸ, ಒಳ್ಳೆಯ ಸಮಯಕ್ಕೆ ಬಂದೆಯಲ್ಲಾ....ಏನೇ ಪೆಚ್ಚುಪೆಚ್ಚಾಗಿ ನಿಂತಿದ್ದೀಯಾ? ಬಾರೇ ಒಳಗೆ—ಬಂದು ಹಸೆಯಮೇಲೆ ಕೂತಿರುವ ಕೃಷ್ಣನನ್ನು ಆಶೀರ್ವದಿಸು. ನೀನು ಅವನ ಪಾಲಿಗೆ ತಾಯಿಗಿಂತ ಹೆಚ್ಚಾಗಿರುವೆ. ನಾನು ಹೆತ್ತತಾಯಿ, ನೀನು ಪ್ರೀತಿಯ ತಾಯಿ" ಎಂದಳು.

ಮುದುಕಿಗಂತೂ ಬ್ರಹ್ಮಾನಂದವಾಯಿತು. "ಎಲ್ಲ ನನ್ನ ಪುಣ್ಯ ಕಣ್ರವ್ವಾ, ನನ್ನಾಗದ ದೇವ್ರು ಕಣ್ರವ್ವಾ ನಮ್ಮ ಕೃಷ್ಣಚಂದ್ರರು.... ಇಟ್ಟು ದಿವ್ಸ ನಾನು ಖಾಯ್ಲೆಯಾಗಿ ಮಲಗ್ಬಿಟ್ಟಿದ್ದೆ ಕಣ್ರವ್ವಾ." ಅಂದುಕೊಂಡು ಕಣ್ಣುಗಳಲ್ಲಿ ತುಂಬಿಹರಿಯುತ್ತಲಿದ್ದ ಆನಂದಬಾಷ್ಪವನ್ನು ಸೆರಗಿನ ತುದಿಯಿಂದ ಒರೆಸಿಕೊಳ್ಳುತ್ತಾ ಒಳಹೊಕ್ಕಳು. ಹಸೆಯಮೇಲೆ ಶಿಂಗರಿಸಲ್ಪಟ್ಟು ಕೂತಿದ್ದ ಕೃಷ್ಣಚಂದ್ರನನ್ನು ಕಂಡು ಸಾಕ್ಷಾತ್ ಕೃಷ್ಣದೇವರನ್ನು ಕಂಡಂತೆ ಮೈ ಉಬ್ಬಿದಳು ಆ ಮುದುಕಿ. ಮುದುಕಿಯ ಆಗಮನವನ್ನು ಕಂಡೊಡನೆ ಬಾಲಕನು ಆನಂದದೊಡನೆ ಹಸೆಯಿಂದೆದ್ದು ಚಿಮ್ಮಿ ಓಡಿಬಂದು ಮುದುಕಿಯನ್ನು ತಬ್ಬಿಕೊಂಡು "ಅಜ್ಜೀ, ಇಷ್ಟೊಂದು ದಿನ ಏಕೆ ಬರಲಿಲ್ಲ? ನನ್ಮೇಲೆ ಸಿಟ್ಟಾಗಿದ್ದೀಯಾ?" ಎಂದು ಮುದ್ದು ಮುದ್ದಾಗಿ ಕೇಳಿದನು.

"ಇಲ್ಲಾ ಕಂದಾ, ಖಾಯಿಲೆಯಾಗಿ ಮಲಗ್ಬಿಟ್ಟಿದ್ದೆ ಕಂದಾ, ನನ್ನಾಪಿಣಾ, ನಿನ್ನಾಕಣ್ದೆ ನನ್ಗಂಟಾದ ದುಃಖವೆಷ್ಟೋ ನಿಜವಾಗ್ಯೂ. ಕೂಸು ಬಹಳ ಇಳಿದ್ಹೋಗವ್ನೆ ತಾಯಿ!" ಎಂದು ಮಗುವನ್ನು ಅಪ್ಪಿಕೊಂಡಳು. ಅವಳ ಪ್ರೇಮಾಲಿಂಗನದಲ್ಲಿ ಆ ಬಾಲಕನಿಗೆ ಸ್ವರ್ಗಸುಖವೇ ಉಂಟಾ ಯಿತು. ಅದೇತರಹದಲ್ಲಿ ತನ್ನ ಮಗುವನ್ನೂ, ಪತಿಯನ್ನೂ ಅತಿಬಾಲ್ಯ ದಲ್ಲಿಯೇ ಕಳೆದುಕೊಂಡಿದ್ದ ಆ ಮುದುಕಿಗೂ ಮಗುವಿನ ಸ್ಪರ್ಶದಿಂದ ಸ್ವರ್ಗಸುಖವೇ ಲಭಿಸಿತು. ಈ ನೋಟವನ್ನು ಕಂಡು ಅಲ್ಲಿ ನೆರೆದಿದ್ದವ ರೆಲ್ಲರೂ ಬೆರಗಾದರು. ಸ್ವಲ್ಪ ಕಾಲ ಕಳೆದನಂತರ ಮುದುಕಿಯು ಮಗುವನ್ನು ಕೆಳಗಿಳಿಸಿ ನೆಟಕೇ ಮುರಿದು, ತಾನು ಮಾರುವದಕ್ಕೆಂದು ತಂದಿದ್ದ ಬುಟ್ಟಿಯ ಹಣ್ಣುಗಳನ್ನೆಲ್ಲಾ ಬಾಲಕನ ಮುಂದೆ ಸುರಿದು "ನನ್ಕಂದಾ, ಇದೇ ಈ ದಿನ ನಿನಗೆ ಕಾಣಿಕೆ" ಅಂದು, ಆನಂದಬಾಷ್ಪ ವನ್ನು ಸುರಿಸಿದಳು.

* * * *

ಇದಾದ ಐದಾರು ದಿವಸಗಳಲ್ಲಿ ಮೇಲೂರಿಗೆ ಮುದುಕಿ ಕೆಂಪವ್ವನು ಹೋಗಬೇಕಾಗಿ ಬಂತು. ಹೋದವಳು ತಂಗಿಯ ಒತ್ತಾಯಕ್ಕೆ ಒಳಪಟ್ಟ ವಳಾಗಿ ಒಂದೆರಡು ತಿಂಗಳಕಾಲ ಮೇಲೂರಿನಲ್ಲೇ ನಿಲ್ಲಬೇಕಾಯಿತು. ಆದರೆ ಅವಳ ದೇಹವು ಮಾತ್ರ ಮೇಲೂರಿನಲ್ಲಿದ್ದಿತೇ ವಿನಾ ಅವಳ ಮನ ಸ್ಸೆಲ್ಲವೂ ಕೃಷ್ಣಚಂದ್ರನಲ್ಲಿಯೇ ಇತ್ತು. ಒಂದೆರಡು ತಿಂಗಳ ನಂತರದಲ್ಲಿ ತನ್ನ ಸ್ಥಳಕ್ಕೆ ಹಿಂತಿರುಗಿದವಳೇ "ಕೊಡಗಿನ್ ಕಿತ್ತಳೇ ಹಣ್ಣು.... ಕೊಡಗಿನ್ ಕಿತ್ತಳೇ ಹಣ್ಣು ಬೇಕೇನ್ರವ್ವಾ, ಕೊಡಗಿನ್ ಕಿತ್ತಳೇ ಹಣ್ಣಾ ...." ಎಂದು ಮಾರುತ್ತಾ ಕೃಷ್ಣಚಂದ್ರನ ಮನೆಯ ಕಡೆಗೆ ಬಂದಳು. ಮನೆಯ ಮುಂದೆ ಬಾಲಕನ ಸುಳಿವೇ ಇಲ್ಲ. ಕದವನ್ನು ತಟ್ಟಿದಳು. ಕದವು ತೆರೆಯಿತು. ಮನೆಯೊಳಗೂ ಮಗುವಿನ ಸುಳಿವಿಲ್ಲ. ಕದವನ್ನು ತೆರೆದ ಕಮಲಮ್ಮನು ಮುದುಕಿಯನ್ನು ಕಂಡೊಡನೆ "ಗೋಳೋ" ಎಂದು ಅಳತೊಡಗಿದಳು.

ಮುದುಕಿಗೆ ಕಮಲಮ್ಮನ ಈ ವರ್ತನೆಯನ್ನು ಕಂಡು ಏನೋ ಅನಾಹುತವಾಗಿರಬೇಕೆಂದು ತುಂದಟ್ಟಾಯಿತು. ಅವಳ ಮೈ ಗಡಗಡನೆ

ನಡುಗಲಾರಂಭಿಸಿತು. ನಿಂತಲ್ಲಿಯೇ ಕುಳಿತುಬಿಟ್ಟಳು. ತಲೆಯ ಮೇಲಿದ್ದ ಹಣ್ಣಿನ ಕುಕ್ಕೆಯು ಕೆಳಕ್ಕೆ ಉರುಳಿ ಹಣ್ಣುಗಳೆಲ್ಲವೂ ಚೆಲ್ಲಾ ಪಿಲ್ಲಿಯಾಗಿ ಮೂಲೆಗೊಂದು ಉರುಳಿಹೋದವು. ಮುದುಕಿಯು "ತಾಯಿ! ಬೇಗ ಹೇಳಿ ತಾಯಿ ನನ್ಕಂದನೆಲ್ಲಿ? ನನ್ನ ಕೃಷ್ಣನೆಲ್ಲಿ? ನನ್ನ ಸಂಪತ್ತೆಲ್ಲಿ? ನನ್ನ ಸಾವಿನಾಗೇನಾಯ್ತು...." ಅಂತ ಗೋಳಿಡ ತೊಡಗಿದಳು.

ಕಮಲಮ್ಮನು ಗದ್ಗದ ಸ್ವರದಲ್ಲಿ "ನಾ—ನೇ—ನು ಹೇ—ಳ—ಲೇ—ಹೂಂ—ಹೂಂ—ಹೂಂ—ಎರ—ಡೇ—ದಿನ ಆಮ—ಶಂಕೆ ಕಂಡು ನನ್ನ ಕೃಷ್ಣ—ಯ—ಮ—ನ—ಪಾ—ದ.... ಅಯ್ಯೋ ಸಾಯೋ—ವಾಗ್ಲೂ ಅಜ್ಜೀ, ಅಜ್ಜೀ ಹಣ್ಣು ತಂದ್ಯಾ? ಅಂದ್ಕೊಂ—ಡೇ—ಸತ್ತ". ಹೇಳುತ್ತಿರುವಾಗಲೇ ಬಿಕ್ಕು ಇನ್ನೂ ಹೆಚ್ಚಿತು.

ಮುದುಕಿಯು "ಅಯ್ಯಯ್ಯೋ" ಎಂದು ಕಿರಿಚಿ ಮುಖವನ್ನು ಕೈಗಳಿಂದ ಮುಚ್ಚಿಕೊಂಡು ಬಿಕ್ಕಿ ಬಿಕ್ಕಿ ಅಳಲಾರಂಭಿಸಿದಳು. ಅವಳ ದುಃಖವನ್ನು ಕಮಲಮ್ಮನಿಂದಲೂ ಸಂತೈಸಲಾಗಲಿಲ್ಲ. ಬಹಳ ಹೊತ್ತಿನ ಮೇಲೆ ಹಣ್ಣಿನ ಬುಟ್ಟಿಯನ್ನು ತಲೆಯಮೇಲೆ ಹೊತ್ತುಕೊಂಡು, ಹೊರಟುಹೋದಳು. ಇದುವರೆಗೂ ಆ ಊರಿನಲ್ಲಿ ಅವಳ ಸುಳಿವೇ ಇಲ್ಲ!

---

# ಭಗವದನುಗ್ರಹ

"ಅಮ್ಮಾ, ಘಂಟೆ ಏನೀಗ?" ಎಂದಳು ಅಡಿಗೆಯ ಮನೆಯಲ್ಲಿ ಉಂಡೆಕಟ್ಟುತ್ತಲಿದ್ದ ಭವಾನಿ.

"ನಡುಮನೆಯಲ್ಲಿ ಉಯ್ಯಾಲೆಯಲ್ಲಿ ಕುಳಿತು ತೂಗುತ್ತಲಿದ್ದ ಮನೆಯ ಯಜಮಾನಿಯಾದ ಸೀತಮ್ಮನು "ಒಂದು ಘಂಟೆಹೊಡೆದು ಹತ್ತು ನಿಮಿಷವಾಯಿತು" ಎಂದು ಗೋಡೆಯಲ್ಲಿ ತಗಲುಹಾಕಿದ್ದ ಗಡಿಯಾರವನ್ನು ನೋಡಿ ಗಟ್ಟಿಯಾಗಿ ಕೂಗಿಕೊಂಡಳು.

"ಅದೇ ಮತ್ತೆ ಕೇಳಿದೆ. ೧೨॥ ಘಂಟೆಗೆಲ್ಲಾ ರೈಲು ಬಂದುಬಿಟ್ಟಿರಬೇಕಲ್ಲಾ? ಯಾಕಿನ್ನೂ ಮೋಟರು ಬಂದಿಲ್ಲ? ಅಡಿಗೆಯೆಲ್ಲವೂ ತಣ್ಣಗಾಗಿಬಿಡುತ್ತದಲ್ಲಾ" ಎಂದಳು ಭವಾನಿ ಅಡಿಗೆಯ ಮನೆಯಿಂದಲೇ.

"ಈಗ ಬಂದುಬಿಡುವರು. ಮಕ್ಕಳು ಮರಿಯೊಂದಿಗೆ ಬರುವುದೆಂದರೆ ಸಾಮಾನ್ಯವೇ? ಸ್ವಲ್ಪ ಹೊತ್ತೇ ಆಗುವುದು...." ಎಂದಳು ಯಜಮಾನಿಯಮ್ಮ.

ಅಷ್ಟರಲ್ಲಿಯೇ ಬೀದಿಯ ಬಾಗಿಲ ಮುಂದೆಯೊಂದು ಮೋಟರು ಗಾಡಿಯು ಬಂದು ನಿಲ್ಲಲಾಗಿ, ಸೀತಮ್ಮನು ಉಯ್ಯಾಲೆಯಿಂದೆದ್ದು ಬೀದಿಗೆ ಬಂದಳು. ಭವಾನಿಯೂ ಕೈಯನ್ನು ಸಹ ತೊಳೆದುಕೊಳ್ಳದೆ ಮೋಟರು ಬಂದ ಶಬ್ದವನ್ನು ಕೇಳಿ ನಡುಮನೆಗೆ ಓಡಿಬಂದಳು.

ಮಗುವಾದ ಮಾಲಿನಿಯು ಮೋಟರಿನಿಂದ ಇಳಿದೊಡನೆಯೇ "ಮಾವಿ, ಮಾವಿ! ನಾನು ಬಂದುಬಿಟ್ಟೆ! ಇಕೋ!" ಎಂದು ಓಡಿಬಂದು ಭವಾನಿಯನ್ನು ತಬ್ಬಿಕೊಂಡಳು. ತಾನು ಮಡಿಯೆಂಬ ಅರಿವೂ ಇಲ್ಲದೆ ಮಗುವನ್ನು ಪ್ರೇಮಪೂರ್ವಕವಾಗಿ ತಬ್ಬಿ ಮುತ್ತಿಟ್ಟುಕೊಂಡು "ಬಂದುಬಿಟ್ಟೆಯಾ ನನ್ನ ಚಿನ್ನಾ, ನೀನಿಲ್ಲದೆ ಹಬ್ಬವು ಹಬ್ಬವಾಗುವುದೇನು?" ಎಂದು ಹಿಗ್ಗಿದಳು ಭವಾನಿ.

ಮೋಟರಿನಿಂದ ಮಗುವಿನ ಸಹಿತ ಇಳಿದುಬಂದ ಸುಮಾರು ಇಪ್ಪತ್ತೆರಡು ಪ್ರಾಯವಾದ ಮಾಲಿನಿಯ ತಾಯಿಯು "ಲೇ, ಕತ್ತೆ!

ಮಾಮಿಯನ್ನು ಮುಟ್ಟಿಬಿಟ್ಟೆಯಲ್ಲೇ! ಅವಳು ಮಡಿಯೋ ಏನೋ" ಎಂದು ತನ್ನ ಮಗಳನ್ನು ಖಂಡಿಸುತ್ತಾ ಕಂಕುಳಲ್ಲಿದ್ದ ಮಗುವನ್ನು ತನ್ನ ತಾಯಿಯ ಕೈಯಲ್ಲಿ ಕೊಟ್ಟು ಉಯ್ಯಾಲೆಯಲ್ಲಿ ಕುಳಿತಳು.

ಭವಾನಿಯು "ನನ್ನ ಬಂಗಾರ ಮುಟ್ಟಿದಲ್ಲಿ ಚಿಂತೆಯಿಲ್ಲಾಮ್ಮಾ. ಮತ್ತೊಂದು ಸಲ ಸ್ನಾನಮಾಡಿದರಾಯಿತು. ಏನೀಗ ಬಾಮ್ಮಾ ಚಿನ್ನಾ! ಮೈ ತೊಳಿಸಿ ಊಟ ಹಾಕುತ್ತೇನೆ. ಎಷ್ಟೊಂದು ಹೊತ್ತುಆಗಿಬಿಟ್ಟಿತಲ್ಲಾ!" ಎಂದು ಮತ್ತೊಮ್ಮೆ ಮಗುವನ್ನೆತ್ತಿ ಅದರ ತುಂಬುಗೆನ್ನೆಗಳಲ್ಲಿ ಮುತ್ತಿನ ಮಳೆಯನ್ನು ಸುರಿಸಿದಳು.

ಸೀತಮ್ಮನು ಮೊಮ್ಮಗನನ್ನು ಮುದ್ದಾಡುತ್ತಾ "ಏನೇ ಸುಲೋಚನಾ! ಅಳಿಯಂದಿರು ಬರಲಿಲ್ಲವೇನೇ?" ಎಂದು ಕೇಳಿದಳು.

"ಅವರಿಗೆ ಒಟ್ಟಿಗೆ ಹತ್ತು ದಿನಗಳು 'ಸರ್‌ಕೀಟ್' ಇದೆಯಂತೆ. ಈ ಗವರ್ನ್‌ಮೆಂಟ್ ಕೆಲಸದವರಿಗೆ ರಜ ಎಲ್ಲಿ ಸಿಕ್ಕುವದು? ಯಾವಾಗಲೂ ದುಡಿಯುತ್ತಿರಬೇಕಷ್ಟೇ. 'ಹಬ್ಬಕ್ಕೆ ನಾನೂ ಊರಲ್ಲಿರುವುದಿಲ್ಲ. ನಂಬುಗೆಯ ಸೇವಕನಾದ ರಾಮಯ್ಯನನ್ನು ಜೊತೆಗೆ ಕರೆದುಕೊಂಡು ನೀನು ಹೋಗಿಬಾ. ಅಪ್ಪಾವರಂತೂ ನಾಲ್ಕು ಕಾಗದಗಳನ್ನು ಹಾಕಿದು ದಾಯಿತು ಪಾಪ!' ಎಂದು ನನ್ನನ್ನು ಮಾತ್ರ ಕಳಿಸಿಕೊಟ್ಟರು. ಅಪ್ಪಾ ಎಲ್ಲೀಮ್ಮಾ?" ಎಂದಳು ಸುಲೋಚನೆ.

"ಅಪ್ಪಾವರು ಪಕ್ಕದಮನೆಯವರ ಕಾರಿನಲ್ಲಿ, ಅವರೊಡನೆಯೇ ಕೋರ್ಟಿಗೆ ಹೊರಟುಹೋದರು" ಎಂದು ಉತ್ತರವಿತ್ತಳು ಸೀತಮ್ಮ. ಅಷ್ಟರಲ್ಲಿಯೇ ಭವಾನಿ "ಸುಲೋಚನಮ್ಮಾ! ಪೆಟ್ಟಿಗೆಯ ಬೀಗದ ಕೈ ಕೊಂಚ ಕೊಡುತ್ತೀರಾ? ಲಂಗ, ಅಂಗಿಗಳನ್ನು ತೆಗೆದುಕೊಂಡು ಹೋಗಿ ಮಗುವಿಗೆ ಮೈ ತೊಳೆದುಬಿಟ್ಟು, ನಾನೂ ಸ್ನಾನಮಾಡಿ ಮಡಿಯುಟ್ಟುಕೊಳ್ಳುತ್ತೇನೆ" ಎಂದಳು.

ಸುಲೋಚನೆಯು ಬೀಗದ ಕೈಯನ್ನು ಕೊಟ್ಟಳು. ಭವಾನಿಯು ಮೋಟರಿನಿಂದ ರಾಮಯ್ಯನು ಒಳಗೆ ತಂದಿಟ್ಟ ಪೆಟ್ಟಿಗೆಯೊಂದನ್ನು ತೆರೆದು ಲಂಗ, ಅಂಗಿ, ಟವಲು ಎಲ್ಲವನ್ನೂ ತೆಗೆದುಕೊಂಡಳು.

ಸೀತಮ್ಮನು "ಬಾರೇ ಮಾಲಿನೀ! ನಾನು ಮೈ ತೊಳೆಯುತ್ತೇನೆ. ಭವಾನಿ ಮುಂಚೆ ಸ್ನಾನಮಾಡಿದರೆ ತಾನೇ ಮಡಿಯಾಗಿ ಅಡಿಗೆಯನ್ನು ಮುಟ್ಟಿ ಬಡಿಸಬಹುದು" ಎಂದು ಮೊಮ್ಮಗಳನ್ನು ಪ್ರೀತಿಯೊಡನೆ ಕರೆದಳು.

ಆದರೆ ಮಗುವಾದ ಮಾಲಿನಿಯು "ಊಹೂಂ....ನಾನು ಮಾಮಿಯ ಹತ್ತಿರವೇ ಸ್ನಾನಮಾಡೋದು. ಇಂದು ಎಲ್ಲೀ ಮಾಮಿ?" ಎನ್ನುತ್ತಾ ಭವಾನಿಯ ಕೈಯನ್ನು ಬಿಗಿಯಾಗಿ ಹಿಡಿದುಕೊಂಡಳು. ಭವಾನಿಯು ಮಗುವಿನ ಪ್ರೇಮವೆಂಬ ಮಧುವನ್ನು ಕುಡಿದು "ಅವಳು ಸ್ಕೂಲಿಗೆ ಹೋಗಿದ್ದಾಳೆ ಚಿನ್ನಾ! ನಾಲ್ಕು ಘಂಟೆಯೊಳಗಾಗಿ ಬಂದು ಬಿಡುವಳು" ಎನ್ನುತ್ತಾ ಬೀಗದ ಕೈಯನ್ನು ಸುಲೋಚನೆಯ ಕೈಯಲ್ಲಿ ಕೊಟ್ಟು ಮಗುವನ್ನು ಸ್ನಾನಕ್ಕೆ ಕರೆದೊಯ್ದಳು.

* * * *

ಶ್ರೀಮಾನ್ ವೇಣುಗೋಪಾಲರಾಯರು ಮದರಾಸಿನ ಹೈಕೋರ್ಟಿನಲ್ಲಿ ಜಡ್ಜು ಪದವಿಯನ್ನಲಂಕರಿಸಿದ್ದರು. ಅವರ ಧರ್ಮಪತ್ನಿಯೇ ಸೀತಮ್ಮನು. ಅವರುಗಳ ಏಕಮಾತ್ರ ಪುತ್ರಿಯಾದ ಸುಲೋಚನೆಯ ಪತಿಯು ಒಬ್ಬ ಐ.ಸಿ.ಎಸ್. ಪದವೀಧರರು. ಅವರು ಶೇಲಂ ಜಿಲ್ಲೆಯಲ್ಲಿ ಸಬ್-ಕಲೆಕ್ಟರರಾಗಿದ್ದರು. ರಾಯರು ತಮ್ಮ ಮಗಳನ್ನೂ, ಅಳಿಯಂದಿರನ್ನೂ ಪ್ರತಿಯೊಂದು ದೀವಳಿಗೆಯ ಹಬ್ಬಕ್ಕೂ ತಮ್ಮಲ್ಲಿಗೆ ಕರೆಸಿಕೊಳ್ಳುವ ಪದ್ಧತಿ. ಅದೇ ರೀತಿಯಲ್ಲಿ ಈ ಸಲವೂ ಅವರುಗಳನ್ನು ಹಬ್ಬಕ್ಕೆ ಕರೆದಿದ್ದರು. ಆದರೆ ಕಲೆಕ್ಟರರವರಿಗೆ ರಜ ಸಿಗಲಿಲ್ಲವಾದುದರಿಂದ ಸುಲೋಚನೆಯನ್ನು ಮಾತ್ರ ತೌರುಮನೆಗೆ ಕಳುಹಿಸಿಕೊಟ್ಟರು.

ಭವಾನಿಯು ಸುಮಾರು ಒಂದೂವರೆ ವರ್ಷವಾಗಿ ಜಡ್ಜು ಕುಟುಂಬದಲ್ಲಿ ಅಡಿಗೆಯ ಕೆಲಸ ನೋಡುತ್ತಿದ್ದಳು. ಅವಳ ಪತಿಯು ಮದರಾಸಿನ ಜಯಲಕ್ಷ್ಮೀ ಬ್ಯಾಂಕಿನಲ್ಲಿ ಗುಮಾಸ್ತನಾಗಿದ್ದನು. ಎರಡು ವರ್ಷಗಳಿಗೆ ಹಿಂದೆ ಅವನು ಕೆಲಸವಾಗಿದ್ದ ಬ್ಯಾಂಕಿನಲ್ಲಿ ಅವನ ಮೇಲಧಿಕಾರಿಯೊಬ್ಬನು ಲೆಕ್ಕಪತ್ರದಲ್ಲಿ ಯಾವುದೋ ಒಂದು ದೊಡ್ಡ ತಪ್ಪಿತವನ್ನು ಮಾಡಿಬಿಟ್ಟು ಭವಾನಿಯ ಗಂಡನಮೇಲೆ ಅನ್ಯಾಯವಾಗಿ ಆ ತಪ್ಪಿತವನ್ನು ಹೊರಿಸಿ,

ಅವನನ್ನು ಬ್ಯಾಂಕ್ ಮಾಲೀಕರಿಗೆ ತೋರಿಸಿಕೊಟ್ಟುಬಿಟ್ಟನು. ಬ್ಯಾಂಕಿನ ಮಾಲೀಕರು ಅವನನ್ನು ನಂಬಿದವರಾಗಿ ಭವಾನಿಯ ಪತಿಯಾದ ಶೇಖರನನ್ನು ಕೆಲಸದಿಂದ ತೆಗೆದುಬಿಟ್ಟು ಅವನು ೭,೦೦೦ ರೂ. ಅಪರಾಧ ಹಣವನ್ನು ಬ್ಯಾಂಕಿಗೆ ಕಟ್ಟಬೇಕೆಂದು ಅಪ್ಪಣೆ ಇತ್ತರು. ಶೇಖರನು ಸ್ವಭಾವತರವಾಗಿ ಬಹಳ ಮರ್ಯಾದಸ್ತನು, ಯೋಗ್ಯನು. ಈ ಅಪಮಾನವನ್ನು ಸಹಿಸಲಾರದವನಾಗಿ ಮನೆಯ ಸಾಮಾನು ಮುಂತಾದ್ದನ್ನೂ ಹೆಂಡತಿಯ ಮೈಮೇಲಿದ್ದ ಒಡವೆ ವಸ್ತುಗಳನ್ನೂ ಮಾರಿ ಬ್ಯಾಂಕಿಗೆ ಅಪರಾಧದ ಹಣವನ್ನು ಸಲ್ಲಿಸಿ, ಒಂದು ದಿವಸ ಅರ್ಧರಾತ್ರಿಯಲ್ಲಿ ಯಾರ ಪತ್ತಿರದಲ್ಲೂ ಹೇಳದೆ ಅಕಸ್ಮಾತ್ತಾಗಿ ಅದೆಲ್ಲಿಗೋ ಕಾಣದೆ ಓಡಿಹೋಗಿಬಿಟ್ಟನು.

ಬಡವಳಾದ ಭವಾನಿ ಏನುಮಾಡಬಲ್ಲಳು! ದಿಕ್ಕಿಲ್ಲದೆ ಸ್ವಲ್ಪ ದಿವಸ ಅಲ್ಲಲ್ಲಿ ಅಲೆದಾಡಿ, ಕೊನೆಗೆ ಜಡ್ಜರವರ ಮನೆಯಲ್ಲಿ ಅಲ್ಪವೇತನದಲ್ಲಿ ಅಡಿಗೆಯ ಕೆಲಸಕ್ಕೆ ಸೇರಿದಳು. ಜೊತೆಗೆ ವಿರಾಮಕಾಲದಲ್ಲಿ ಹಪ್ಪಳ, ಸಂಡಿಗೆ, ಅವಲಕ್ಕಿ ಮುಂತಾದುವನ್ನು ತಯಾರಿಸಿ, ಮಾರಿ ಹಣ ಸಂಪಾದಿಸಿ ಜೀವನ ನಡೆಯಿಸಲಾರಂಭಿಸಿದಳು. ಜಡ್ಜರವರ ಪತ್ನಿಯಾದ ಸೀತಮ್ಮನು ಅವಳ ಮತ್ತು ಅವಳ ಮಗುವಿನ ಕಷ್ಟದೆಶೆಯನ್ನು ಕಂಡು ಮನಗರಗಿ, ತಮ್ಮ ಬಂಗಲೆಯ ಔಟ್‌ಹೌಸಿನಲ್ಲೊಂದು ಕೊಠಡಿಯನ್ನು ಖಾಲಿಮಾಡಿಸಿ, ಅವರಿಗೆ ವಾಸಿಸಲು ಕೊಟ್ಟಳು.

ಭವಾನಿಯು ಮಾನವಾಗಿ ಬದುಕಿದವಳು, ಒಳ್ಳೆಯ ಜಾಣೆ, ವಿನಯಶೀಲೆ, ಪುಟಹಾಕಿದ ಚಿನ್ನದಂತೆ ಶೋಭಿಸುತ್ತಲಿದ್ದಿತು ಅವಳ ಗುಣ. ಕಳೆದವರ್ಷ ಸುಲೋಚನೆಯು ಪ್ರಸವಕ್ಕಾಗಿ ತೌರುಮನೆಗೆ ಬಂದಿದ್ದಾಗ ಮಾಲಿನಿಯು ಅವಳ ಹತ್ತಿರ ಚೆನ್ನಾಗಿ ಅಂಟಿಕೊಂಡುಬಿಟ್ಟಳು. ಮಾಲಿನಿಯೂ ಭವಾನಿಯ ಕುವರಿಯಾದ ಇಂದುಬಾಲೆಯೂ ಒಂದೇ ಪ್ರಾಯದವರು. ಸುಲೋಚನೆಯು ಬಾಣಂತಿಯಾಗಿದ್ದಾಗ ಸೀತಮ್ಮನಿಗೆ ಮಗಳ ಬಾಣಂತನವನ್ನು ಮಾಡುವುದಕ್ಕೆ ಮೊದಲು ಕೈಲಾಗುತ್ತಿರಲಿಲ್ಲ. ಸಾಲದುದಕ್ಕೆ ಅವಳ ದೇಹವು ಸ್ವಲ್ಪ ಸ್ಥೂಲವಾದದ್ದು ಪಾಪ! ಭವಾನಿಯು ಬೇಗನೆ ಅಡಿಗೆಯ ಕೆಲಸವನ್ನು ಮಾಡಿ ಮುಗಿಸಿಕೊಂಡು ಎಲ್ಲವನ್ನೂ ಮುಚ್ಚಿಟ್ಟುಬಿಟ್ಟು, ಮೈಲಿಗೆ ಮುಟ್ಟಿಕೊಂಡು

ಮಾಲಿನಿಗೆ ಸ್ನಾನ ಮಾಡಿಸಿ, ಹೆರಳುಹಾಕಿ, ಊಟಮಾಡಿಸಿ ಎಲ್ಲವನ್ನೂ ಮಾಡುವಳು. ಒಂದೊಂದು ದಿವಸ ಮಾಲಿನಿಯನ್ನೂ, ಇಂದುವನ್ನೂ ಬೆಳದಿಂಗಳಲ್ಲಿ ಕುಳ್ಳಿರಿಸಿ, ಅನ್ನ ಕಲಸಿ ತಮಾಷೆಯಾಗಿ ಕೈತುತ್ತು ಹಾಕುವಳು. ವಿರಾಮವಿದ್ದಾಗ ಮಕ್ಕಳಿಬ್ಬರನ್ನೂ ಹತ್ತಿರ ಕುಳ್ಳಿರಿಸಿಕೊಂಡು ಕಥೆ ಹೇಳುವಳು. ಸಣ್ಣಪುಟ್ಟ ಕಂದನ ಕಾವ್ಯಗಳನ್ನೂ ಹೇಳಿಕೊಡುವಳು. ದೇವಸ್ಥಾನಕ್ಕೆ ಕರೆದುಕೊಂಡು ಹೋಗುವಳು. ಈ ರೀತಿಯಾಗಿ ಮಾಲಿನಿಯು ಭವಾನಿಯ ಹತ್ತಿರದಲ್ಲಿ ಬಹಳ ಹೊಂದಿಕೊಂಡುಬಿಟ್ಟಳು. ಸುಲೋಚನೆಯು ಪತಿಯ ಮನೆಗೆ ಹಿಂದಿರುಗಿದಾಗ ಮಾಲಿನಿಯು ತನ್ನ ಅಜ್ಜಿ ತಾತಂದಿರನ್ನು ಬಿಟ್ಟಗಲುವುದಕ್ಕಿಂತ ಇಂದೂ ಮತ್ತು ಭವಾನಿಯನ್ನು ಬಿಟ್ಟಗಲಲಾರದೆ ಬಿಕ್ಕಿಬಿಕ್ಕಿ ಅತ್ತುಬಿಟ್ಟಳು. ಭವಾನಿಯೂ ಸಹ ತನ್ನ ಪ್ರೀತಿಯ ಕರುವನ್ನು ಬಿಟ್ಟಗಲಲಾರದ ಗೋವಿನಂತೆ ದುಃಖವು ಗಂಟಲನ್ನು ಬಿಗಿಯಲು, ಕಂಬನಿಯನ್ನು ಧಾರಾಕಾರವಾಗಿ ಸುರಿಸಿದಳು.

ಆದಿನ ಆ ಪ್ರೇಮಿಗಳೀರ್ವರು ಪುನಃ ಕೂಡಿದವರಾಗಿ ಆನಂದ ಬಾಷ್ಪವನ್ನು ಸುರಿಸಿದರು. ಸುಲೋಚನೆಯೂ, ಸೀತಮ್ಮನೂ ಭೋಜನವನ್ನು ಮುಗಿಸಿಕೊಂಡು ಸ್ವಲ್ಪಹೊತ್ತು ವಿಶ್ರಾಂತಿಹೊಂದಲು ತಂತಮ್ಮ ಕೊಠಡಿಗಳಿಗೆ ಹೊರಟುಹೋದರು. ಮಾಲಿನಿಗೆ ಹೊತ್ತು ಹೋಗಲಿಲ್ಲ. ಭವಾನಿಯ ಮನೆಗೆ ಓಡಿಹೋದಳು. ಭವಾನಿಯು ಹಪ್ಪಳವನ್ನು ಲಟ್ಟಿಸುತ್ತಾ ಮಾಲಿನಿಯೊಡನೆ ಹರಟೆ ಹೊಡೆಯುತ್ತಲಿದ್ದಳು. ಮಾಲಿನಿಯು ತನ್ನ ತಮ್ಮಯ್ಯನ ಆಟಪಾಟಗಳನ್ನು ಕುರಿತೂ ತನ್ನ ಶಿಶುವಿಹಾರದ ಸಂಗಾತಿಯನ್ನು ಕುರಿತೂ ಬಗೆಬಗೆಯಾಗಿ ಹೆಮ್ಮೆಕೊಚ್ಚಿಕೊಳ್ಳುತ್ತಾ ತೊದಲ್ನುಡಿಗಳ ಮಳೆಯನ್ನು ಕರೆಯುತ್ತಿದ್ದಳು.

* * * *

ಸಂಧ್ಯಾಕಾಲ. ಇಂದುವು ಶಿಶುವಿಹಾರದಿಂದ ಹಿಂದಿರುಗಿ ಬಂದ ಕೂಡಲೇ ಮಾಲಿನಿಯ ಆಗಮನವನ್ನು ತಿಳಿದು ಆನಂದದಿಂದಲೂ ಆತುರದಿಂದಲೂ ಬೇಗಬೇಗನೆ ಕೈಕಾಲುಗಳನ್ನು ತೊಳೆದುಕೊಂಡು, ಅಮ್ಮನು ಮುಚ್ಚಿಟ್ಟಿದ್ದ ಕಾಫಿಯನ್ನು ಕುಡಿದು ಜಡ್ಜ್‌ರವರ ಬಂಗಲೆಗೆ ಓಡಿಬಂದಳು.

ಜಡ್ಜ್‌ರವರು ಕೋರ್ಟಿನಿಂದ ಬಂಗಲೆಗೆ ಹಿಂದಿರುಗಿ ಬರುವಾಗ ಹಾಗೆಯೇ ಅಂಗಡೀಬೀದಿಯಿಂದ ಮೊಮ್ಮಗಳಿಗಾಗಿ ತುಂಬ ಪಟಾಕಿ, ಮತಾಪು ಮುಂತಾದುವುಗಳನ್ನು ಕೊಂಡುತಂದು ಮಗುವಿನಕೈಗೆ ಕೊಟ್ಟು ಒಳಗೆಹೋಗಿ ಕಾಫೀ ಕುಡಿಯುತ್ತಲಿದ್ದರು. ಅದಕ್ಕೆ ಹಿಂದಿನ ದಿವಸವೇ ಸೀತಮ್ಮನು ಟೌನಿಗೆ ಹೋಗಿ ಜವಳೀ ಮುಂತಾದುವುಗಳನ್ನು ಕೊಂಡು ತಂದುಬಿಟ್ಟಿದ್ದಳು.

ಆಗತಾನೇ ಅಜ್ಜನು ತಂದುಕೊಟ್ಟ ಪಟಾಕಿಗಳನ್ನು ನಡುಮನೆಯಲ್ಲಿ ಹಾಸಿದ್ದ ರತ್ನಗಂಬಳಿಯಮೇಲೆ ಹರಡಿಕೊಂಡು ಹಿಗ್ಗುತ್ತಿದ್ದಳು ಮಾಲಿನಿ. ಇಂದುವನ್ನು ಕಂಡೊಡನೆಯೇ "ಇಂದೂ, ಇಂದೂ! ಬೇಗ ಓಡಿಬಾರೇ, ಇಕೋ, ನೋಡು! ತಾತನು ನನಗೆ ಎಷ್ಟೊಂದು ಪಟಾಕಿ ಕೊಂಡು ತಂದಿರುವರು. ಐದಾರು ಮಾದರಿಗಳಲ್ಲಿ ಮತಾಪುಗಳನ್ನು ಕೊಂಡು ತಂದಿರುವರು! ನಾಳೆ ನಾವಿಬ್ಬರೂ ಕೂಡಿ ಹೊತ್ತಿಸೋಣವೇ?" ಎಂದು ಮಿತಿಮೀರಿದ ಆನಂದದಿಂದ ಕೈಚಪ್ಪಾಳೆ ಹೊಡೆದಳು.

ಇಂದು ಆಶ್ಚರ್ಯದಿಂದ ಕಣ್ಣುಗಳನ್ನು ದೊಡ್ಡದಾಗಿ ಮಾಡಿಕೊಂಡು ಮಾಲಿನಿಯ ಪಟಾಕಿ ಮತಾಪುಗಳನ್ನು ನುಂಗಿಬಿಡುವವಳಂತೆ ದಿಟ್ಟಿಸಿ ನೋಡಿದಳು.

ಮಾಲಿನಿಯು "ಇಷ್ಟುಮಾತ್ರವೇ ಎಂದು ತಿಳಿದಿರುವಿಯೇನು? ನಮ್ಮಜ್ಜಿಯು ನನಗೆ ನಾಳೆ ಉಟ್ಟುಕೊಳ್ಳಲು ಹೊಸದಾದ ಜರತಾರೀ ಲಂಗ, ಸಿಲ್ಕ್ ಜಂಪರ್ ಎಲ್ಲವನ್ನೂ ಹೊಲಿಸಿಟ್ಟಿರುವಳಲ್ಲಾ! ನಿನಗೂ ನಿಮ್ಮಮ್ಮನು ಕೊಂಡಿಟ್ಟಿರುವಳೋ ಇಲ್ಲವೋ?" ಎಂದು ಅಂದವಾಗಿ ಕೊರಳನ್ನು ಕೊಂಕಿಸಿ ಹೆಮ್ಮೆಯಿಂದ ಕೇಳಿದಳು.

ಇಂದುವಿನ ಮುಖ ತಟ್ಟನೆ ಸೂರ್ಯಾಸ್ತಮಾನದ ಕಮಲಪುಷ್ಪದಂತೆ ಸಣ್ಣದಾಯಿತು. ಗದ್ಗದಸ್ವರದಲ್ಲಿ "ನನಗೆ ಅಮ್ಮನೊಂದೂ ಕೊಂಡಿಟ್ಟಿಲ್ಲವಲ್ಲಾ. ನಾವು ಬಡವರಲ್ಲವೇ?" ಎಂದಳು.

ಮಾಲಿನಿಯು "ಮಾಮಿಗೇನೇ? ನಮ್ಮಜ್ಜಿಯು ಸಂಬಳ ಕೊಡುತ್ತಾರಲ್ಲಾ?" ಎಂದಳು.

ಇಂದು "ಅಷ್ಟೊಂದು ಸ್ವಲ್ಪ ಹಣವು ಊಟಕ್ಕೇ ಸಾಲದೆಂದು ನಮ್ಮಮ್ಮನು ಹೇಳುತ್ತಿರುತ್ತಾಳಲ್ಲಾ?"

ಮಾಲಿನಿ "ಸಾಲದಿದ್ದರೆ ಇನ್ನೂ ಕೊಂಚ ಕೊಡು ಎಂದು ನಮ್ಮಜ್ಜಿಯನ್ನು ಕೇಳಿದರೆ ಕೊಡುತ್ತಾಳೆ. ಅಜ್ಜಿಯ ಹತ್ತಿರ ಪೆಟ್ಟಿಗೆಯ ತುಂಬ ಹಣವಿದೆಯಲ್ಲಾ" ಎಂದಳು.

ಇಂದುವು "ಸರಿ, ಅಮ್ಮನನ್ನು ಕೇಳಿನೋಡುತ್ತೇನೆ. ಪಟಾಕಿಯೆಲ್ಲವನ್ನೂ ತೆಗೆದುಕೊಂಡುಹೋಗಿ ನಿಮ್ಮಮ್ಮನ ಹತ್ತಿರದಲ್ಲಿ ಕೊಟ್ಟು ಬಾ ಆಡೋಣ. ಐಯ್ಯಯ್ಯ! ನಾ ಪುಟ್ಟ ಪಾಪನನ್ನು ಇನ್ನೂ ನೋಡಲೇ ಇಲ್ಲವಲ್ಲಾ" ಎಂದು ಕಣ್ಣುಗಳಲ್ಲಿ ತೇಲುತ್ತಲಿದ್ದ ಕಣ್ಣೀರನ್ನು ಲಂಗದ ತುದಿಯಿಂದ ಒರಸಿಕೊಳ್ಳುತ್ತಾ ಆ ಪಟಾಕಿ ಮುಂತಾದುವುಗಳನ್ನು ನೋಡಲು ಸಹಿಸದವಳಂತೆ ಮುಖವನ್ನು ಬೇರೆಯಕಡೆಗೆ ತಿರುಗಿಸಿಕೊಂಡು ಸುಲೋಚನೆಯ ಕೊಠಡಿಯನ್ನು ಕುರಿತು ಓಡಿದಳು.

"ಇಕೋ ಬಂದೆ!" ಎಂದು ಹೇಳುತ್ತಾ ಮಾಲಿನಿಯೂ ಸಹ ಒಂದು ರಟ್ಟುಪೆಟ್ಟಿಗೆಯಲ್ಲಿ ಪಟಾಕಿ ಮುಂತಾದುವನ್ನೂ ಬೇಗನೆ ಬಾಚಿ ತುಂಬಿಕೊಂಡು ಇಂದುವನ್ನು ಹಿಂಬಾಲಿಸಿದಳು.

*    *    *    *

ಅಂದು ರಾತ್ರಿ ಇಂದುವು ತಾಯಸಮೀಪದಲ್ಲಿ ಒರಗಿಕೊಂಡು "ಅಮ್ಮಾ! ಅಮ್ಮಾ! ನನಗೆ ನಾಳೆಯ ದಿನ ಉಟ್ಟುಕೊಳ್ಳಲು ಹೊಸ ಲಂಗವನ್ನು ಹೊಲಿಸುವಿಯೋ?" ಎಂದು ಮೃದುಮಧುರ ಕಂಠದಲ್ಲಿ ಮಾತೆಯನ್ನು ಆಲಿಂಗಿಸಿಕೊಂಡು ಕೇಳಿದಳು. ಮಾತೆಯು ತನ್ನ ಮುದ್ದು ಕಂದನನ್ನು ಸವರುತ್ತಾ "ನನ್ನ ಹತ್ತಿರದಲ್ಲಿ ಹೊಸ ಬಟ್ಟೆ ಹೊಲಿಸಲು ಹಣವೆಲ್ಲಿದೆ ಚಿನ್ನಾ?" ಎಂದಳು ಗದ್ಗದ ಸ್ವರದಲ್ಲಿ.

"ಯಾಕೆ? ನಿನ್ನಹತ್ತಿರ ಹಣವಿಲ್ಲ? ಜಡ್ಜ್ ಮಾಮಾನೇ ತಿಂಗಳು ತಿಂಗಳು ನಿನಗೆ ಸಂಬಳ ಕೊಡುತ್ತಾರಲ್ಲಾ?"

"ಅದು ನಮ್ಮ ಊಟದ ಖರ್ಚಿಗೇ ಸಾಲುವುದಿಲ್ಲವಲ್ಲಾ ಮಗೂ."

"ಜಡ್ಜ್‌ಮಾಮಯ ಹತ್ತಿರದಲ್ಲಿ ಇನ್ನೂ ಪೆಟ್ಟಿಗೆಯ ತುಂಬ ಹಣವಿದೆಯೆಂದು ಮಾಲಿನಿ ಹೇಳುತ್ತಾಳಲ್ಲಾ. ಕೊಂಚವೇ ಕೊಂಚ ಕೊಡೆಂದು ಕೇಳು?"

"ಅವರು ಸುಮ್ಮಸುಮ್ಮನೆ ನಮಗೆ ಕೊಡಲಾರರು ಮಗೂ, ನಾವು ಮಾಡುವ ಕೆಲಸಕ್ಕೆ ತಕ್ಕಂತೆ ಕೂಲಿ ಕೊಡುತ್ತಾರೆ. ನಾಳೆ ನೋಡಿ ಕೊಳ್ಳೋಣ. ನಿದ್ರೆಮಾಡು ರಾಜ! ಬಹಳ ಹೊತ್ತಾಯಿತಲ್ಲಾ. ನಾಳೆಯ ಬೆಳಿಗ್ಗೆ ಶೀಘ್ರವಾಗಿ ಹಾಸಿಗೆಯಿಂದ ಎದ್ದು ಎಣ್ಣೇಸ್ನಾನ ಮಾಡಬೇಕಲ್ಲಾ!" ಎಂದು ಮಗುವನ್ನು ಸಂತೈಸಲಾರಂಭಿಸಿದಳು.

ಇಂದುವು "ಆದರೆ ನಾನು ನಾಳೆ, ಎಣ್ಣೇಸ್ನಾನ ಮಾಡೋಲ್ಲಾ ಹೋಗು" ಎಂದು ಗೊಣಗುತ್ತಾ ಮತ್ತೊಂದು ಪಾರ್ಶ್ವಕ್ಕೆ ಹೊರಳಿ ಮಲಗಿಕೊಂಡಳು.

ಭವಾನಿಯು ಮಗುವನ್ನು ತಬ್ಬಿಕೊಂಡು "ಹಾಗೆಲ್ಲಾ ಆಡಬಾರದು ಚಿನ್ನಾ! ನಾಳೆ ಸ್ನಾನಮಾಡಿ, ಮಡಿಯುಟ್ಟುಕೊಂಡು ದೇವರನ್ನು ಪ್ರಾರ್ಥಿಸಿಕೋ. ತುಂಬ ಹಣ ಕೊಡುತ್ತಾರೆ. ಬರುವವರ್ಷ ಹಬ್ಬಕ್ಕೆ ನಾನು ನಿನಗೆ ಜೋಕಾದ ಹೊಸ ಲಂಗವನ್ನು ಹೊಲಿಸುವೆನಂತೆ. ನಾವು 'ಜಂ' ಎಂದು ಹಬ್ಬ ಕೊಂಡಾಡೋಣವಂತೆ" ಎಂದು ಹಲವು ಬಗೆಯ ಸಮಾಧಾನೋಕ್ತಿಗಳನ್ನು ಹೇಳುತ್ತಾ ಹಾಗೆಯೇ ಆ ಶ್ರಮಜೀವಿ ನಿದ್ದೆಹೋದಳು.

ಇಂದುವಿಗೆ ಮಾತ್ರ ಬೇಗನೆ ನಿದ್ರೆ ಹತ್ತಲಿಲ್ಲ. "ಯಾಕೆ ದೇವರು ನಮ್ಮನ್ನು ಮಾತ್ರ ಬಡವರನ್ನಾಗಿ ಇಟ್ಟಿರುವನು? ಮಿಕ್ಕವರಿಗೆಲ್ಲಾ ತುಂಬ ತುಂಬ ದುಡ್ಡು ಕೊಡುತ್ತಾನಲ್ಲಾ? ಆದರೆ ಅಮ್ಮನು ಹೇಳುವಂತೆ ಪ್ರತಿನಿತ್ಯವೂ ದೇವರನ್ನು ಬೇಡಿಕೊಳ್ಳುತ್ತೇನೆ. ದೇವರೇ, ಭಗವಂತಾ! ನಮ್ಮಮ್ಮನಿಗೆ ತುಂಬಾ ಹಣಕೊಡಪ್ಪಾ, ನಮ್ಮಮ್ಮನು ನನಗೆ ತುಂಬ ತುಂಬ ಹೊಸ ಲಂಗ, ಅಂಗಿ ಎಲ್ಲವನ್ನೂ ಹೊಲಿಸಬೇಕು" ಎಂದು ಜಪಿಸುತ್ತಾ ಆ ಅರಿಯದ ಹಸುಳೆ ಹಾಗೆಯೇ ನಿದ್ರೆಹೋದಳು.

ಭವಾನಿಯು ಮರುದಿನ ಮುಂಜಾನೆ ನಾಲ್ಕುಘಂಟೆಗೆಲ್ಲಾ ಹಾಸಿಗೆ ಯಿಂದ ಎಚ್ಚತ್ತು, ಮುಖ ತೊಳೆದುಕೊಂಡು ತನ್ನ ಮನೆಯ ಬೀದಿಯ ಬಾಗಿಲ ಮುಂದೆ ಸಗಣಿನೀರನ್ನು ಹಾಕಿ ರಂಗೋಲೆ ಇಟ್ಟು, ಕೆಮ್ಮಣ್ಣು ಬಳಿದಳು. ಬಳಿಕ ಶೀಘ್ರವಾಗಿ ಸ್ನಾನ ಮುಗಿಸಿಕೊಂಡು ಮಗುವಿಗೆ ಅಭ್ಯಂಗಸ್ನಾನ ಮಾಡಿಸಿದೊಡನೆಯೇ ಬಾಯಿಗೆ ಹಾಕಿಕೊಳ್ಳುವುದಕ್ಕಾಗಿ

ಶುಂಠೀ ಬೆಲ್ಲವನ್ನು ಕುಟ್ಟಿಟ್ಟು, ಸ್ವಲ್ಪ ಸಜ್ಜಿಗೆಯನ್ನು ತಯಾರಿಸಿ ಇಟ್ಟಳು. ಬಡವರ ಮನೆಯ ಹಬ್ಬ. ಆ ಬಡ ಮಗುವಿಗೆ ಸಜ್ಜಿಗೆಯೇ ಪಂಚಭಕ್ಷ್ಯ ಪರಮಾನ್ನವಾಗಿತ್ತು! ಅನಂತರದಲ್ಲಿ ಶೀಘ್ರವಾಗಿ ಬಂಗಲೆಗೆ ತೆರಳಿ, ಜಡ್ಜರಮನೆಯ ಕೆಲಸಕಾರ್ಯಗಳಲ್ಲಿ ನಿರತಳಾದಳು.

* * * *

ಏಳು ಘಂಟೆಯ ಸಮಯ. ಊರಲ್ಲೆಲ್ಲೆಲ್ಲಿಯೂ ಚಟಪಟವೆಂಬ ಪಟಾಕಿ ಸುಡುವ ಶಬ್ದವೂ ಮತಾಪುಬಿಡುವ ವಾಸನೆಯೂ ಆವರಿಸಿದ್ದಿತು. ದಿನಕರನು ನಮ್ಮ ನಾಡ ಮಹೋನ್ನತವಾದ ಹಬ್ಬದ ಕೊಂಡಾಟದಲ್ಲಿ ತಾನೂ ಭಾಗಿಯಾಗಲು ಇಚ್ಛಿಸುವವನಂತೆ ನಸುನಗುತ್ತಾ ತನ್ನ ಎಳೆ ಬಿಸಿಲಿನ ಕಿರಣಗಳ ಮೂಲಕ ಜೀವರಾಶಿಗಳನ್ನು ಸ್ಪರ್ಶಿಸಿ, ತನ್ನ ಸಂತೋಷ ವನ್ನು ಸೂಚಿಸುವವನಂತೆ ಮುದ್ದಿಡುತ್ತಾ ಆಕಾಶದಲ್ಲಿ ಭವನಿ ಬರುತ್ತ ಲಿದ್ದನು. ನಗರವೆಲ್ಲವೂ ಆನಂದಕೋಲಾಹಲದಲ್ಲಿ ಮುಳುಗಿರುವಾಗ ಒಂದೇ ಒಂದು ಎಳೆಜೀವ ಮಾತ್ರ ದುಃಖಸಾಗರದಲ್ಲಿ ಮುಳುಗಿ ತಲ್ಲಣಿ ಸುತ್ತಲಿದ್ದಿತು. ಅದು ಯಾವುದೆಂಬುದು ವಾಚಕ ಮಹಾಶಯರೇ ಊಹಿಸಬಲ್ಲರಲ್ಲವೇ? ನಮ್ಮ ಇಂದು. ದೇವರ ಜಗುಲಿಯ ಮುಂದೆ ಇಳಿಮುಖಮಾಡಿಕೊಂಡು ''ಗುಮ್ಮನೆ'' ಕುಳಿತಿದ್ದಳು. ಅವಳು ಆ ರೀತಿಯಾಗಿ ಎಷ್ಟುಹೊತ್ತಿನಿಂದ ಕುಳಿತಿರುವಳೋ ತಿಳಿಯದು.

ಜಡ್ಜರ ಮನೆಯಲ್ಲಿ ಹೆಂಗಸರು ಮಕ್ಕಳೆಲ್ಲರಿಗೂ ಅಭ್ಯಂಗಸ್ನಾನ ವನ್ನು ಮಾಡಿಸಿ, ಕಡುಬು, ಕಜ್ಜಾಯ ಭಕ್ಷ್ಯಾದಿಗಳನ್ನೂ, ಕಾಫಿಯನ್ನೂ ತಯಾರಿಸಿ ಎಲ್ಲರಿಗೂ ಹಂಚಿದ ಬಳಿಕ, ಭವಾನಿಯು ತನ್ನ ಮುದ್ದು ಗುವರಿಯನ್ನು ಹಸೆಯಮೇಲೆ ಕುಳ್ಳಿರಿಸಿ ಆರತಿ ತೆಗೆದು, ಅಭ್ಯಂಗಸ್ನಾನ ಮಾಡಿಸುವುದಕ್ಕಾಗಿ ಆತುರದಿಂದ ಓಡಿಬಂದಳು. ಮಗಳ ಮುನಿಸನ್ನು ಕಂಡು ಕಳವಳಗೊಂಡವಳಾಗಿ ಬೇಗಬೇಗನೆ ಹಿಟ್ಟಿನ ರಂಗೋಲಿಯ ಮೇಲೆ ಮಣೆಯೊಂದನ್ನು ಹಾಕಿ, ತಟ್ಟೆಯೊಂದರಲ್ಲಿ ಆರತಿಯನ್ನು ಕಲೆಸಿ ತಂದು ಮಣೆಯಮುಂದಿಟ್ಟಳು. ಬಳಿಕ ಕುಂಕುಮ, ತಾಂಬೂಲಾದಿ ಗಳನ್ನು ಒಂದು ತಟ್ಟೆಯಲ್ಲಿ ತೆಗೆದಿಡುತ್ತಾ ''ಬೇಗ ಬಾ ಚಿನ್ನಾ! ಆರತಿ

ಸುತ್ತಿಬಿಟ್ಟು ತಲೆಗೆ ಒಂದು ಕೈ ಎಣ್ಣೆ ಇಡುತ್ತೇನೆ, ಹೊತ್ತಾಗುತ್ತೆ. ಮಾಮಿಯ ಮನೆಗೆ ಅಡಿಗೆಮಾಡಲು ಹೋಗಬೇಡವೇ? ಈ ದಿನ ಹಬ್ಬದ ಊಟಕ್ಕೆ ನಮ್ಮಿಬ್ಬರನ್ನೂ ಅವರ ಮನೆಗೇ ಕರೆದಿರುವರು ಗೊತ್ತೇನು?'' ಎಂದು ಪ್ರೇಮಪೂರ್ವಕವಾಗಿ ಮಗುವನ್ನು ಕರೆದಳು.

''ಊಹೂಂ. . . . ನಾನೊಂದೂ ಸ್ನಾನವಮಾಡೋಲ್ಲಾ ಹೋಗು'' ಎಂದು ಉತ್ತರ ಬಂದಿತು.

''ಯಾಕೆ ಚಿನ್ನಾ? ನನ್ನಮೇಲೆ ಏನು ಕೋಪ'' ಎಂದು ಮಗುವನ್ನು ಸಮೀಪಿಸಿ ಅವಳ ತಲೆಯನ್ನು ನೇವರಿಸುತ್ತಾ ಕೇಳಿದಳು.

ಇಂದುವು ''ನೀನೇನೂ ನನಗೆ ಹೊಸ ಲಂಗ ಹೊಲಿಸಿಕೊಡಲಿಲ್ಲ ವಲ್ಲಾ. ಪಟಾಕಿನೂ ಕೊಂಡುಕೊಡಲಿಲ್ಲ. ನಾನೇಕೆ ಸ್ನಾನ ಮಾಡಲಿ?'' ಎಂದು ಗೊಣಗುಟ್ಟಿದಳು.

ಭವಾನಿಯು ''ಛೀ, ಹಬ್ಬಹುಣ್ಣಿಮೆ ದಿನಗಳಲ್ಲಿ ದಡ್ಡಳಂತೆ ಹಠ ಹಿಡಿಯಬಾರದು. ಬೇಗ ಬಾ, ನನಗೆ ಹೊತ್ತಾಗುತ್ತದೆ. ಆಮೇಲೆ ನಿಮ್ಮ ಅಮ್ಮನು ಜಡ್ಜ್ ಮಾಮಿಯ ಹತ್ತಿರದಲ್ಲಿ ಬೈಗಳು ತಿನ್ನಬೇಕೆಂದು ನಿನಗೆ ಆಸೆಯೇನು ?'' ಎಂದು ಅಂಗಲಾಚಿದಳು.

ಮಗುವಿನ ಮನಸ್ಸು ಕರಗಿತು. ''ಆದರೆ ನನಗೆ ಸುಮ್ಮನೆ ಎಣ್ಣೆಯ ಸ್ನಾನಮಾಡಿಸಿಬಿಡು. ಆರತಿಯೂ ಬೇಡ, ಏನೂ ಬೇಡ'' ಎಂದಳು ಮಗು.

ಮಗುವು ಇಷ್ಟಕ್ಕಾದರೂ ಸಮ್ಮತಿಸಿದಳಲ್ಲಾ ಎಂದು ಭವಾನಿಯು ಅದಕ್ಕೆ ಮೇಲೆ ಏನೊಂದೂ ಮಾತನಾಡದೆ ಮಗುವನ್ನು ಕರೆದುಕೊಂಡು ಹೋಗಿ ಅಭ್ಯಂಗಸ್ನಾನವನ್ನು ಮಾಡಿಸಿದಳು.

ಸಾವಿರದೆಂಟು ತೇಪೆಗಳು ಹಾಕಲ್ಪಟ್ಟ ಮಡಿಯಾದ ಉಡುಪುಗಳನ್ನು ಉಟ್ಟು, ಇಂದು ದೇವರ ಮುಂದೆ ಬಂದು ''ದೇವರೇ, ಭಗವಂತಾ, ನಮ್ಮಮ್ಮನಿಗೆ ತುಂಬ ಹಣ ಕೊಡಪ್ಪಾ. ನಮ್ಮಮ್ಮನು ನನಗೆ ಹೊಸ ಲಂಗವನ್ನು ಹೊಲಿಸಿಕೊಟ್ಟು ತುಂಬ ಪಟಾಕಿ ಮತಾಪುಗಳನ್ನು ಕೊಂಡುಕೊಡಲಿ'' ಎಂದು ತನ್ನ ನಿಷ್ಕಳಂಕ ಹೃದಯದಿಂದ ಹೊರಟ ಪ್ರಾರ್ಥನೆಯನ್ನು ಬಾಯಿಬಿಟ್ಟು ನುಡಿಯುತ್ತಾ ದೇವರಿಗೆ

ಸಾಷ್ಟಾಂಗವಾಗಿ ನಮಸ್ಕರಿಸಿದಳು. ಈ ವಾಕ್ಯವನ್ನು ಕಿವಿಗೊಂಡು ಭವಾನಿಯು ತಲ್ಲಣಿಸಿದಳು.

ಅಷ್ಟರಲ್ಲಿಯೇ ಬೀದಿಯ ಬಾಗಿಲಿನಿಂದ "ಅಮ್ಮಾ ಪೋಸ್ಟ್, ಪೋಸ್ಟ್! ಭವಾನಿಯಮ್ಮನವರ ಮನೆ ಇದೇ ತಾನೇ?" ಎಂಬ ಧ್ವನಿಯು ಕೇಳಬಂದಿತು.

"ನಮಗೆ ಕಾಗದ ಬರೆಯುವವರಾರಿರುವರು? ಒಂದುವೇಳೆ ಅವರು....ಛೇ! ಛೇ! ಇರಲಾರದು" ಎಂದು ಕಳವಳ ಹೊಂದಿದವಳಾಗಿ ಭವಾನಿಯು ಬೀದಿಗೆ ಹೋಗಿ ನಡುಗುವ ಕೈಯಿಂದ ಅಂಚೆಯವನು ಕೊಟ್ಟ ಎರಡು ಚೀಟಿಗಳಿಗೆ ರುಜುಮಾಡಿಕೊಟ್ಟು, ಅವನು ಕೊಟ್ಟ ಇನ್‌ಷ್ಯೂರ್ ಲಕೋಟೆಯೊಂದನ್ನೂ ದೊಡ್ಡ ಪಾರ್ಸಲ್ ಪ್ಯಾಕೆಟ್ ಒಂದನ್ನೂ ಪಡೆದಳು.

ಅಷ್ಟರಲ್ಲಿಯೇ ಇಂದುವು ತನ್ನ ಪ್ರಾರ್ಥನೆಯನ್ನು ಮುಗಿಸಿಕೊಂಡು ಬೀದಿಗೆ ಬಂದು ಅಮ್ಮನ ಮುಖದ ಬದಲಾವಣೆಯನ್ನೂ, ಅವಳ ಕೈಯ್ಯಲ್ಲಿದ್ದ ದೊಡ್ಡದೊಂದು ಪೊಟ್ಟಣವನ್ನೂ ಕಂಡು ಆಶ್ಚರ್ಯಭರಿತಳಾಗಿ "ಏನಮ್ಮಾ, ಇದು!" ಎಂದು ಆತುರದೊಡನೆ ಕೇಳಿದಳು. ಇಂದುವು ಬರುವುದರೊಳಗಾಗಿಯೇ ಭವಾನಿಯು ನಡುಗುವ ಕೈಗಳಲ್ಲಿ ಲಕೋಟೆಯನ್ನು ಒಡೆದು ನೋಡಿದಳು. ಅದರಲ್ಲಿ ಹತ್ತು ಐದು ರೂಪಾಯಿಗಳ ನೋಟುಗಳೂ, ಪತ್ರವೊಂದೂ ಕಂಗೊಳಿಸಿದುವು. ಹೌದು, ಅದು ಅವಳ ಪ್ರಾಣನಾಥನ ಕೈಬರಹವೇ! ಐ.ಸಿ.ಎಸ್. ಪ್ಯಾಸ್‌ಮಾಡಿದ ನೂತನ ಪದವೀಧರನಿಗೂ ಸಹ ಭವಾನಿಯು ಆಗ ಅನುಭವಿಸಿದ ಸಂತೋಷವೇರ್ಪಟ್ಟಿರಲಾರದು. ಅದರಲ್ಲಿ ಕೆಳಗೆ ಕಂಡರೀತಿಯಲ್ಲಿ ಬರೆಯಲ್ಪಟ್ಟಿದ್ದಿತು :—

ನನ್ನ ಪ್ರಿಯಸತಿಯಾದ ಭವಾನಿಗೆ ಅನೇಕಾನೇಕ......ಗಳು.

ನಿನ್ನ ಸೌಭಾಗ್ಯದ ದೆಸೆಯಿಂದ ನನಗೆ ಈಗ ಬೆಂಗಳೂರಿನ ಗವರ್ನ್‌ಮೆಂಟ್ ಎಲೆಕ್ಟ್ರಿಕ್ ಫ್ಯಾಕ್ಟರಿಯಲ್ಲಿ ತಿಂಗಳಿಗೆ ೧೫೦ ರೂ. ವೇತನದಲ್ಲಿ ಒಂದು ಉದ್ಯೋಗ ದೊರತಿದೆ. ಕೆಲಸ ದೊರಕಿ ಎರಡು ತಿಂಗಳಾಯಿತು.

ಕೈಯಲ್ಲಿ ಸ್ವಲ್ಪ ಹಣ ಸೇರಿದನಂತರ ನಿನಗೆ ನನ್ನ ವಾಸಸ್ಥಳವನ್ನು ತಿಳಿಸೋಣವೆಂದಿದ್ದೆ. ನಾನಂತೂ ನನ್ನ ಸ್ನೇಹಿತ ಕಿಟ್ಟುವಿನ ಮೂಲಕವಾಗಿ ರಹಸ್ಯದಲ್ಲಿ ನಿನ್ನ ವಾಸಸ್ಥಳವನ್ನೂ, ನಿನ್ನ ಮತ್ತು ಮಗುವಿನ ಕ್ಷೇಮಸಮಾಚಾರವನ್ನೂ ಪತ್ರವ್ಯವಹಾರದ ಮೂಲಕ ತಿಳಿದುಕೊಳ್ಳುತ್ತಲಿದ್ದೇನೆ.

ದೀವಳಿಗೆಗಾಗಿ ನಿನಗೂ ಮಗಳಿಗೂ ಬೆಂಗಳೂರಿನ ಫ್ಯಾಕ್ಟರೀ ಸಿಲ್ಕ್ ಸೀರೆಯನ್ನೂ ಲಂಗವನ್ನೂ ಸಿಲ್ಕನ್ನೂ ಕಳುಹಿಸಿರುವೆನು. ಇಂದುವಿಗೆ ತುಂಬ ಪಟಾಕಿಗಳನ್ನೂ ಕೊಂಡುಕೊಡು. ಮಗುವು ನನ್ನನ್ನು ಜ್ಞಾಪಿಸಿಕೊಳ್ಳುತ್ತಾಳೆಯೇ? ಮುಂದಿನವಾರ ರಜ ತೆಗೆದುಕೊಂಡು ಬಂದು ನಿಮ್ಮಿಬ್ಬರನ್ನೂ ಇಲ್ಲಿಗೆ ಕರೆತರುತ್ತೇನೆ. ಗಂಗಾಸ್ನಾನದ ವೇಳೆಗೆ ಸರಿಯಾಗಿ 'ಪಾರ್ಸಲು' ನಿಮಗೆ ತಲಪುವಂತೆ ಕಳುಹಿರುವೆನು. ನಿಮ್ಮಿಬ್ಬರಿಗೂ ಅನೇಕ ಆಶೀರ್ವಾದಗಳೂ, ಹೊರೆಹೊರೆಯಾಗಿ....ಗಳೂ.

ಇಂತೀ
ನಿನ್ನ ಪ್ರೇಮದ....
**ಶೇಖರ**

ಇಂದುವು ಕೇಳಿದ ಪ್ರಶ್ನೆಗೆ, ಭವಾನಿಯು "ಚಿನ್ನಾ! ಭಗವಂತನು ನಿನ್ನ ಪ್ರಾರ್ಥನೆಗೆ ಅನುಗ್ರಹಿಸಿಬಿಟ್ಟನಲ್ಲೇ! ಇಕೋ! ನಿನಗೆ ಹೊಸ ಲಂಗ ಬಂದಿದೆ! ಇಷ್ಟುಮಾತ್ರವಲ್ಲದೆ ನಿನಗೆ ಅಪ್ಪಾವರೂ ದೊರಕಿಬಿಟ್ಟರಲ್ಲೇ!" ಎಂದು ಅತ್ಯಾನಂದದ ದೆಶೆಯಿಂದ ರೋಮಾಂಚನ ಹೊಂದಿದವಳಾಗಿ ಮಗುವಿನ ಕಡೆಗೆ ಪಾರ್ಸಲನ್ನು ನೀಡಿದಳು.

---

# ಪರೀಕ್ಷೆ

" ಚಿಕ್ಕಮ್ಮಾ ತಿಂಡೀ ಕೊಡ್ತೇ" ಎನ್ನುತ್ತಾ ಭಾನು ಪಾಠಶಾಲೆಯಿಂದ ಬಂದವನು ಪುಸ್ತಕದ ಚೀಲವನ್ನು ನಡುಮನೆಯಲ್ಲಿದ್ದ ಮೇಜಿನ ಮೇಲೆ ಬಿಸಾಡಿಬಿಟ್ಟು ಚಿಕ್ಕಮ್ಮನನ್ನು ಸಮೀಪಿಸಿದನು.

ದೇವಸ್ಥಾನಕ್ಕೆ ಹೋಗಿಬರುವುದಕ್ಕಾಗಿ ಸಣ್ಣದಾದ ಪುಷ್ಪದ ಪುಟ್ಟಿಯೊಂದರಲ್ಲಿ ಎಲೆ, ಅಡಿಕೆ, ತೆಂಗಿನಕಾಯಿ ಮುಂತಾದುವನ್ನು ತೆಗೆದಿಡುತ್ತಲಿದ್ದ ಶಾರದೆಯು " ಇಂದು ತಿಂಡಿಗಿಂಡಿ ಏನೂ ಇಲ್ಲ. ರಾಗಿಯ ಹುರಿಹಿಟ್ಟಷ್ಟನ್ನು ಕಲೆಸಿ ಅಡಿಗೆಯ ಮನೆಯ ಗೂಡಿನಲ್ಲಿ ಇಟ್ಟಿದ್ದೇನೆ. ಅದರಲ್ಲಿ ಒಂದು ಉಂಡೆಯನ್ನು ತೆಗೆದುಕೊಂಡು, ಒಲೆಯ ಹತ್ತಿರದಲ್ಲಿ ಮುಚ್ಚಿಟ್ಟಿರುವ ಕಾಫಿಯನ್ನು ಕುಡಿದುಬಿಟ್ಟು ಬಾ ಹೋಗು" ಎಂದಳು.

" ಥೂ, ದಿನವಹಿ ಹುರಿಹಿಟ್ಟು ಒಂದೇನೇ, ಅವಸ್ಥೆ. ನನಗೇನೂ ಬೇಡ."

" ಬೇಡದಿದ್ದರೆ ಹೋಗು. ಯಾರಿಗೇನು ನಷ್ಟ? ಮುಂಜಾನೆಯೇ ಎದ್ದು, ಅರ್ಧರಾತ್ರಿಯ ವರೆವಿಗೂ ನಾನು ದುಡಿಯುವುದರಲ್ಲೇನೂ ಕಡಿಮೆ ಇಲ್ಲ. ಈ ಮನೆಯಲ್ಲಿ ನನ್ನಮೇಲೆ ಕನಿಕರಪಡುವವರು ಯಾರಿರುವರು ? ಸಣ್ಣ ಮಗುವಿನಿಂದ ದೊಡ್ಡವರ ವರೆವಿಗೂ ನನ್ನಮೇಲೆ ಅಧಿಕಾರ ಮಾಡುವವರೇ. ಒಂದು ದಿವಸ ಮಾತ್ರಕ್ಕೆ ಭಕ್ಷ್ಯಮಾಡದೇ ಹೋದಲ್ಲಿ, ನೆಲದಲ್ಲಿ ಬಿದ್ದ ನೆಲ್ಲೀಕಾಯಿಯಂತೆ ಕುಣಿಯುತ್ತಾನೆ. . . ." ಎಂದು ಎಡಬಿಡದೆ ಮಾತುಗಳ ಸರಣಿಯನ್ನು ಪೋಣಿಸತೊಡಗಿದಳು ಶಾರದೆ.

" ಚಿಕ್ಕಮ್ಮಾ, ಸುಮ್ಮನೆ ಬಾಯಿಗೆ ಬಂದಂತೆ ಮಾತನಾಡಬೇಡ. ಏನಾದರೂ ತಿಂಡಿ ಕೊಡುವುದಾದರೆ ಕೊಡು. ಇಲ್ಲದಿದ್ದಲ್ಲಿ ನಾನೆಲ್ಲಾದರೂ ತೊಲಗಿಹೋಗುತ್ತೇನೆ. . . . . ." ಎಂದನು ಭಾನು.

"ಓಹೋ! ನನ್ನನ್ನು ಬೆದರಿಸುತ್ತೀಯೇನು? ಈಗಲೇ ತೊಲಗಿ ಹೋಗು ಮತ್ತೆ, ಬೇಡವೆಂದವರಾರು? ಬೆಳಗಾದರೆ ಮನೆಯಲ್ಲಿ ಆಯುಷ್ಯ ಹೋಮ ನಡೆಯಬೇಕು. ಹತ್ತಾರು ವೈದೀಕರು ಊಟಕ್ಕೆ ಬರುತ್ತಾರೆ. ನಾನೊಬ್ಬಳು, ಅಂಗಡಿಗೆ ಕಳುಹಿಸಿ ಸಾಮಾನುಗಳನ್ನು ತರಿಸಲೇ, ಒಬ್ಬನ ರಂಗೋಲಿ ಹಾಕಲೇ, ತರಕಾರಿ ಹೆಚ್ಚಲೇ, ಅಡಿಗೆ ಮಾಡಲೇ ಅಥವಾ ನಿನಗೆ ಭಕ್ಷ್ಯವನ್ನು ಮಾಡುತ್ತಾ ಕುಳಿತಿರಲೇ? ನನಗೆ ದೇವರು ತಾನೇ ಹತ್ತಾರು ಕೈಗಳನ್ನು ಕೊಟ್ಟಿರುವನೇ, ಹಾಗೆ ಒಟ್ಟಿಗೆ ಮಾಡೋಣವೆಂದರೆ" ಎಂದು ಏನೇನೋ ಜೋಡಿಸುತ್ತಲಿದ್ದಳು.

ಅಷ್ಟರೊಳಗಾಗಿ ಸಿದ್ದನು ಸೊಸೈಟಿಯಿಂದ ಗೋಣೀಚೀಲದ ಮೂಟೆಯೊಂದನ್ನು ಹೊತ್ತು ತಂದು ನಡುಮನೆಯಲ್ಲಿ ಇಳಿಸಿದ. "ಆಗಲೇ ಎಲ್ಲ ಸಾಮಾನುಗಳನ್ನೂ ತಂದಿದ್ದಾಯಿತು ಎಂದೆಯಲ್ಲಾ" ಎಂದು ಕೇಳಿದಳು ಶಾರದೆ.

"ಸಾಮಾನು ಜಾಸ್ತಿತಾಯಿ. ಕಾಯಿ ಮೂಟೆ ಹೊತ್ತು ತರಲಾರದೇ ಮಡಗಿಬಿಟ್ಟು ಬಂದುಬಿಟ್ಟೆ. ಅದನ್ನೀಗ ತಂದೆ. ಇದನ್ನೂ ಉಗ್ರಾಣದಲ್ಲಿ ಮಡಗಿಬಿಡಲೇನ್ರವ್ವ?"

"ಆಮೇಲೆ ಮಡಗುವಿಯಂತೆ. ಮುಂಚೆ ಹಿತ್ತಲಿಂದ ಒಂದಿಷ್ಟು ಹೂವನ್ನು ಕೊಯ್ದುಕೊಂಡು ಬಾ. ನಾನು ಗುಡಿಗೆ ಹೋಗಬೇಕು. ಹೊತ್ತಾಯಿತು. ಪಕ್ಕದ ಮನೆಯ ಅಮ್ಮನವರು ನನಗಾಗಿ ಆವಾಗಿನಿಂದ ಕಾದಿದ್ದಾರೆ ಪಾಪ"

"ಅವ್ವಾ, ಕೂಸೆಲ್ಲಿ?"

"ಪಕ್ಕದ ಮನೆಯಲ್ಲಿದ್ದಾಳೆ ಹೋಗೋ ಬೇಗ" ಎಂದಳು ಶಾರದೆ. ಅವನು ಹೂ ಕೊಯ್ದುಕೊಂಡು ಬರುವುದರೊಳಗಾಗಿ ಮನೆಯಲ್ಲಿ ಬೀಗ ಹಾಕಬೇಕಾದವುಗಳನ್ನು ಬೀಗ ಹಾಕಿಬಿಟ್ಟು, ಹೊಸ ಸೀರೆಯುನ್ನುಟ್ಟು ಕೊಂಡು ಸಿದ್ಧವಾಗಿ ನಿಂತಳು.

ಭಾನು, ಮುಖವನ್ನು ಒಂದು ಮೊಳದುದ್ದ ಮಾಡಿಕೊಂಡು ಹಿತ್ತಲಲ್ಲಿದ್ದ ಸೀಬೆಯ ಮರದಮೇಲೆ ಹತ್ತಿ ಕುಳಿತಿದ್ದನು. ಸಿದ್ದನು ಹೂವನ್ನು

ಕೊಯ್ದು ತಂದುಕೊಡಲಾಗಿ ಶಾರದೆಯು, "ಲೋ, ಸಿದ್ದ! ಯಜಮಾನರು ಬರುವವರೆವಿಗೂ ಮನೆಯನ್ನು ಜೋಪಾನವಾಗಿ ನೋಡಿಕೊಂಡಿರು. ಆ ಮೇಲೆ ಮನೆಗೆ ಹೋಗು, ಏನು?" ಎಂದಳು. ಸಿದ್ದನು ಹಲ್ಲು ಕಿರಿಯುತ್ತಾ, "ಸರಿಕಣ್ರವ್ವಾ" ಎಂದು ಉತ್ತರವಿತ್ತನು. ಅವನ ಧ್ವನಿಯಲ್ಲಿ ಅಷ್ಟೊಂದು ಹೊತ್ತಿನ ವರೆವಿಗೂ ಮನೆಗೆ ಹೋಗದೆ ಇರಬೇಕಲ್ಲಾ ಎಂಬ ಜುಗುಪ್ಸೆಯು ಪ್ರತಿಫಲಿಸಿತು. ಅವನು ಹಲ್ಲು ತೋರಿಸುವ ರೀತಿಯಲ್ಲಿಯೂ ಅದರ ಛಾಯೆಯು ತೋರದಿರಲಿಲ್ಲ.

ಬಳಿಕ ಭಾನುವಿನ ಹತ್ತಿರದಲ್ಲಿ ಬಂದು, "ಭಾನೂ! ನೀನು ಗುಡಿಗೆ ಬರುತ್ತೀಯೋ, ಇಲ್ಲವೋ?" ಎಂದಳು ಶಾರದೆ.

ಜವಾಬೇ ಇಲ್ಲ. ಸರಿ, ಶಾರದೆಯು ಹೊರಟುಹೋದಳು. ಭಾನುವಿಗೆ ದುಃಖವು ಗಂಟಲನ್ನು ಬಿಗಿಯಿತು. ಸಂಗಡ ಕೋಪವೂ ಸಹ ಉಕ್ಕಿ ಬಂದಿತು. ಆಗ ಅವನ ಮನದ ಕಣ್ಣಿನಲ್ಲಿ ಅವನ ಗತಿಸಿದ ಮಾತೆಯ ಚಿತ್ರವೂ, ಆಕೆಯು ಇದ್ದ ಕಾಲದಲ್ಲಿ ತಾನು ಕಳೆದ ಸುಖದ ದಿನಗಳೂ ಒಂದೊಂದಾಗಿ ತೋರತೊಡಗಿದವು. ಆಗ ಒಂದು ದಿವಸ ತಾನು ಆಟವಾಡಿಕೊಂಡು ಮನೆಗೆ ಬಂದು, ಅಮ್ಮನನ್ನು ತಿಂಡೀಬೇಕೆಂದು ಕೇಳಿದನು. ಅಂದು ಏತರಿಂದಲೋ ಭಕ್ಷ್ಯ ಮಾಡಿರಲಿಲ್ಲ. ಆದರೆ ಭಾನುವಿಗಾಗಿ ಅವನ ತಾಯಿಯು "ಇಗೋ, ಈಗಲೇ ಮಾಡಿಕೊಡುತ್ತೇನೆ ಚಿನ್ನಾ" ಎಂದು ಆಗಲೇ ಒಲೆಯ ಮುಂದೆ ಹೋಗಿ ಕುಳಿತು, ಭಕ್ಷ್ಯವನ್ನು ತಯಾರಿಸಿ ಕೊಟ್ಟಳು. ಆದರೆ ಹೆತ್ತ ಮಾತೆಯ ಆ ಸವಿನುಡಿಗಳನ್ನೂ, ಮಲತಾಯಿಯ ಇಂದಿನ ಬಿರುನುಡಿಗಳನ್ನೂ ಮನಸ್ಸಿನ ತಕ್ಕಡಿಯಲ್ಲಿ ತೂಗಿ ನೋಡಿದನು ಭಾನು. ಅವನ ಕಣ್ಣುಗಳಿಂದೆರಡು ಕಣ್ಣೀರಿನ ಬಿಂದುಗಳು ತೊಟ್ಟಿಕ್ಕಿದುವು. "ಹೌದು, ನಿಜ. ಚಿಕ್ಕಮ್ಮನಿಗೆ ಬರುಬರುತ್ತಾ ನನ್ನನ್ನು ಕಂಡರೆ ಆಗುವುದೇ ಇಲ್ಲ. ನನಗೆ ಇನ್ನುಮೇಲೆ ಯಾರು ಗತಿ? ಏನಂದರೂ ಚಿಕ್ಕಮ್ಮನಿಗೆ ನಾನು ಸವತಿಯ ಮಗನಲ್ಲವೇ? ಅಣ್ಣನೂ ಅವಳ ಕಡೆಗೇ ಸೇರಿಕೊಂಡು ಮಾತನಾಡುತ್ತಾನೆ. ನಾನೇನು ಮಾಡಲಿ........?" ಎಂದು ಯೋಚಿಸಿದನು. ಆಗ ಅವನಿಗೆ ಅಂದು ಬೆಳಗ್ಗಿನಿಂದ ನಡೆದ ಸಂಭವಗಳು ಒಂದೊಂದಾಗಿ ಜ್ಞಾಪಕಕ್ಕೆ

ಬರಲಾರಂಭಿಸಿತು . . . . . . ಭಾನುವು ಹಾಸಿಗೆಯಿಂದೆದ್ದವನು ನಲ್ಲಿಯ ಹತ್ತಿರದಲ್ಲಿ ಹೋಗಿ ಮುಖ ತೊಳೆದುಕೊಳ್ಳುತ್ತಿದ್ದನು. ಅವನ ಚಿಕ್ಕಮ್ಮನು ಮುಸುರೆಯವಳು ತೊಳೆದು ಇಟ್ಟು ಹೋಗಿದ್ದ ಪಾತ್ರೆಗಳಿಗೆ ಹುಣಿಸೆಯ ಹಣ್ಣನ್ನು ಸವರಿ ತೊಳೆಯುತ್ತಿದ್ದವರು ''ಏನೋ ಕತ್ತೆ! ಬರುಬರುತ್ತಾ ನಿನ್ನ ಬುದ್ಧಿ ಬಹಳ ಸೂಕ್ಷ್ಮವಾಗುತ್ತಲಿದೆಯಲ್ಲವೇ? ಲಕ್ಷಣವಾಗಿ ಚೆಂಬೊಂದರಲ್ಲಿ ನೀರನ್ನು ಹಿಡಿದುಕೊಂಡು ಹೋಗಿ, ಹಾಗೆ ಬಾಳೆಯ ಪಾತಿಯ ಹತ್ತಿರದಲ್ಲಿ ಮುಖ ತೊಳೆದುಕೊಳ್ಳಬಾರದೇ? ಈಗ ತಾನೇ ಮೈ ತೊಳೆದುಕೊಂಡು, ಮಡಿಯುಟ್ಟುಕೊಂಡು ಬಂದಿದ್ದೇನೆ. ಮೈಯ ಪೂರ್ತಿಯೂ ಎಂಜಲು ನೀರನ್ನು ಎರಚುತ್ತಿರುವೆಯಲ್ಲಾ. ಪಾತ್ರೆಗಳನ್ನು ನಾನೆಷ್ಟೊಂದು ಸಲ ತೊಳೆಯಲಿ?. . . . .'' ಎಂದು ಎಡಬಿಡದೆ ಮಾತನಾಡುತ್ತಿದ್ದಳು.

ಭಾನುವಿಗೆ ಅಳುವು ಉಕ್ಕಿಬರಲಾಗಿ, ಬಿಕ್ಕುತ್ತಾ ಒಳಗೆ ಹೊರಟು ಹೋದನು. ಬಳಿಕ ಅವನ ಸಹೋದರನ ಓದುವ ಕೊಠಡಿಗೆ ಹೋದನು. ಭಾನುವಿನ ಬಿಕ್ಕಳಿಕೆಯನ್ನು ಕೇಳಿದ ಶಶಿಧರನು ಕೈಯಲ್ಲಿದ್ದ ''ಹಿಂದೂ'' ಪತ್ರಿಕೆಯನ್ನು ಮೇಜಿನಮೇಲಿಟ್ಟು, ''ಭಾನೂ, ಭಾನೂ! ಯಾಕೆ ಅಳುತ್ತೀಯಾ?'' ಎಂದು ತಮ್ಮನನ್ನು ಸಮೀಪಕ್ಕೆ ಹಿಡಿದೆಳೆದು ಕೊಂಡು ಪ್ರೇಮಪೂರ್ವಕವಾಗಿ ತಬ್ಬಿಕೊಂಡನು. ''ಅ. . . . ಣ್ಣಾ. . ಅ. . . . ಣ್ಣಾ. . . . . . ಚಿಕ್ಕಮ್ಮನಿಗೆ ಬರುಬರುತ್ತಾ ನನ್ನನ್ನು ಕಂಡರೆ ಆಗುವುದೇ ಇಲ್ಲ'' ಎಂದು ನಡೆದ ವಿಷಯವನ್ನು ವಿವರಿಸಿ ಹೇಳಿದನು. ಶಶಿಯು ''ನಮ್ಮ ಚಿಕ್ಕಮ್ಮನಲ್ಲವೇ, ಹೋಗಲಿ ಬಿಡು. ಆದರೆ ನಮ್ಮ ಚಿಕ್ಕಮ್ಮನು ಎಲ್ಲರಂತೆ ಕೆಟ್ಟವಳಲ್ಲ ಭಾನೂ! ಅವಳಿಗೆ ಮನಸ್ಸಿನಲ್ಲಿ ಏನಾದರೂ ಅಸಮಾಧಾನ ಹುಟ್ಟಿರಬಹುದು. ಆದ್ದರಿಂದಲೇ ನಿನ್ನೆಯಿಂದ ಎಲ್ಲರಮೇಲೂ ರೇಗಿಬೀಳುತ್ತಿರುತ್ತಾಳೆ. ನೀನು ಜಾಣನಲ್ಲವೇ, ಅಳಬಾರದು. ಹೋಗಿ ಕಾಫಿ ಕುಡುಕೊಂಡು ಬಾ. ಲೆಕ್ಕ ಹೇಳಿಕೊಡು ತ್ತೇನೆ'' ಎಂದು ಸಮಾಧಾನಪಡಿಸಿದನು. ಇದು ಭಾನುವಿಗೆ ಸರಿದೋರ ಲಿಲ್ಲ. ಅಂದೆಲ್ಲವೂ ಅವನ ಚಿಕ್ಕಮ್ಮನ ವರ್ತನೆಯನ್ನು ಕಂಡು, ಅವನಿಗೆ ಅತ್ಯಂತ ಕೋಪವೂ, ದುಃಖವೂ ಉಂಟಾಯಿತು. ಈ ಕಾರಣದಿಂದ ಅವನು

ಅಂದು ಮಧ್ಯಾಹ್ನ ಹೊಟ್ಟೆಯ ತುಂಬಾ ಊಟವನ್ನು ಸಹ ಮಾಡಲಿಲ್ಲ. ಪಾಠಶಾಲೆಯಲ್ಲಿ ಪಾಠವೂ ಸಹ ತಲೆಗೆ ಹತ್ತಲಿಲ್ಲ. ಬಹಳ ಹಸಿವುಂಟಾಯಿತು. ಸರಿ, ಮನೆಗೆ ಬಂದು ಆ ಕೋಪಿಷ್ಟಳಾದ ಚಿಕ್ಕಮ್ಮನನ್ನು ತಿಂಡಿ ಕೊಡೆಂದು ಕೇಳಿದುದಕ್ಕೆ, ಅವನು ತೀರಾ ದ್ವೇಷಿಸುವ ಹುರಿಹಿಟ್ಟನ್ನು ತಿನ್ನೆಂದರೆ ಅವನಿಗೆ ಕೋಪ ಉಂಟಾಗದೆ ಇರುವುದೇ? ಅಂತೂ ಚಿಕ್ಕಮ್ಮನು ಮೆಲ್ಲಗೆ ತನ್ನಮೇಲೆ ಮಲತಾಯಿಯ ಅಧಿಕಾರ ಧೋರಣೆಯನ್ನು ಚಲಾಯಿಸಲು ಪ್ರಾರಂಭಿಸಿಬಿಟ್ಟಳೆಂಬ ತೀರ್ಮಾನಕ್ಕೆ ಬಂದಿಳಿದನು. ಇಂತಹ ಚಿಂತೆಯಲ್ಲಿ ಭಾನುವು ಅದೆಷ್ಟೊಂದು ಹೊತ್ತಿನವರೆವಿಗೆ ತಲ್ಲೀನನಾಗಿದ್ದನೋ, ಅವನಿಗೆ ಅರಿವಿಲ್ಲ.

ಶಾರದೆಯಂತೂ ಒಳ್ಳೆಯ ಹುಡುಗಿಯೇ ಹೌದು. ತನ್ನ ಹದಿನಾರನೆಯ ವಯಸ್ಸಿನಲ್ಲಿಯೇ ಪತಿಯ ಗೃಹಕ್ಕೆ ಪ್ರವೇಶಿಸಿ, ಗೃಹಕೃತ್ಯವನ್ನು ಮಾಡತೊಡಗಿದಳು. ತನ್ನ ಸವತಿಯ ಮಕ್ಕಳಿಬ್ಬರನ್ನೂ ಅಧಿಕವಾದ ಪ್ರೀತಿ ವಾತ್ಸಲ್ಯದೊಡನೆ ಸಾಕುತ್ತಿದ್ದಳು. ತಾಯಿಲ್ಲದ ತಬ್ಬಲಿಯಾದ ಆ ಮಕ್ಕಳಿಗೆ ತಮಗೆ ತಾಯಿಯಿಲ್ಲವಲ್ಲಾ ಎಂಬ ಚಿಂತೆ ತೋರದಂತೆ ಸಾಕುತ್ತಿದ್ದಳೆಂದರೆ, ನೀವೇ ಊಹಿಸಿ ನೋಡಿ ಅವಳ ಮಾತೃವಾತ್ಸಲ್ಯದ ಪ್ರಮಾಣವನ್ನು. ಆದರೆ ಮನುಷ್ಯರು ಯಾವಾಗಲೂ ಒಂದೇ ರೀತಿಯಾಗಿ ಇರಲಾರರು. ಅದರಲ್ಲೂ ಮಲತಾಯಂದಿರು ಮಾತ್ರ ತಮ್ಮ ತಮ್ಮ ಸವತಿಯ ಮಕ್ಕಳಮೇಲೆ ಒಂದೇ ತರಹವಾದ ಪ್ರೇಮವನ್ನು ತೋರಿಸುತ್ತ ಬರುವುದು, ಪ್ರಪಂಚದಲ್ಲಿನ ಅದ್ಭುತಗಳಲ್ಲೂ ಅತ್ಯದ್ಭುತವಾದ ವಿಷಯವೇ.

* * * *

ಶಾರದೆಯು ಸಂಜೆ ಏಳು ಘಂಟೆಯ ಸಮಯದಲ್ಲಿ ನಡುವಿನಲ್ಲಿ ಮಗುವನ್ನೂ, ಕೈಯಲ್ಲಿ ಪುಷ್ಪದ ಪುಟ್ಟಿಯನ್ನೂ ಮತ್ತು ಕಾಗದದಿಂದ 'ಪ್ಯಾಕ್' ಮಾಡಲ್ಪಟ್ಟ ತಟ್ಟೆಯಂತಿದ್ದ ವಸ್ತುವನ್ನೂ ಎತ್ತಿಕೊಂಡು ಮನೆಯೊಳಗೆ ಪ್ರವೇಶಿಸಿದಳು.

ಅವಳ ಪತಿಯು ಆರಾಮ ಕುರ್ಚಿಯೊಂದರಲ್ಲಿ ಕುಳಿತು ವರ್ತಮಾನ ಪತ್ರಿಕೆಯನ್ನು ಓದುತ್ತಲಿದ್ದರು. ಶಾರದೆಯು ಅವರನ್ನು ಸಮಿಾಪಿಸಿ

ತೊಂಟದಲ್ಲಿದ್ದ ಮಗುವನ್ನು ಕೆಳಗಿರಿಸಿ ಕುಳ್ಳಿರಿಸಿಬಿಟ್ಟು ಪೊಟ್ಟಣವನ್ನು ಬಿಚ್ಚಿ ಬೆಳ್ಳಿಯ ತಟ್ಟೆಯೊಂದನ್ನು ತೆಗೆದು "ಏನೂಂದ್ರೆ? ನಿಮ್ಮನ್ನೇ! ಇದು ಚೆನ್ನಾಗಿದೆಯೇ ನೋಡಿ" ಎಂದು ಪತಿಯ ಕೈಯ್ಯಲ್ಲಿ ಕೊಟ್ಟಳು. ರಾಯರು ಸರಿಯಾಗಿ ಎದ್ದು ಕುಳಿತು, ವಿದ್ಯುಚ್ಛಕ್ತಿ ಬೆಳಕಿನಲ್ಲಿ ಥಗ ಥಗವೆಂದು ಹೊಳೆಯುತ್ತಲಿರುವ ತಟ್ಟೆಯನ್ನು ನೋಡಿ "ಓಹೋ, ಜೋಕಾಗಿ ಇದೆಯಲ್ಲಾ, ಯಾರಿಗೆ? ಈ ಪುಟಾಣಿಗೇನು? ಎಂದು ಬಾಗಿ, ಮಗುವಿನ ಮೃದುವಾದ ಕೆನ್ನೆಯನ್ನು ಪ್ರೀತಿಯೊಡನೆ ತಟ್ಟಿ, ತಟ್ಟೆಯನ್ನು ಮಗುವಿನ ಮುಖಕ್ಕೆ ಸರಿಯಾಗಿ ಹಿಡಿದರು. ಮಗುವು ತಟ್ಟೆಯೊಳಗೆ ತನ್ನ ಪ್ರತಿಬಿಂಬವನ್ನು ನೋಡಿ "ಪಾಪಾ, ಪಾಪಾ" ಎಂದು ಚಪ್ಪಾಳೆ ಹೊಡೆಯುತ್ತಾ ನಗಾಡಿತು.

ಶಾರದೆ "ಚೆನ್ನಾಯಿತು, ಹಾಲು ಕುಡಿಯುವ ಮಗುವಿಗೆ ತಟ್ಟೆ ಯಾತಕ್ರೀ? ಬದುಕಿದ್ದರೆ ಅವಳಿಗೂ ಒಂದು ಮಾಡಿದರಾಯಿತು, ಏನೀಗ? ನಮ್ಮ ಭಾನುವಿಗಾಗಿ ಮಾಡಿಸಿದೆ. ಅವನು ಪರೀಕ್ಷೆಯಲ್ಲಿ ಪ್ಯಾಸ್ ಮಾಡಿದರೆ ಒಂದು ಒಳ್ಳೆಯ 'ಪ್ರೆಸೆಂಟ್' ಕೊಡುತ್ತೇನೆಂದು ಹೇಳಿದ್ದೆ. ಜೊತೆಗೆ ನಾಳೆಯ ದಿನ ಮಗುವಿಗೆ ಹುಟ್ಟಿದ ಹಬ್ಬವಾಗಿಯೂ ಇರುವುದಲ್ಲಾ, ಮಗುವಿಗೆ ನಾಳೆ ಊಟಕ್ಕೆ ಇಡೋಣವೆಂದು, ನಿನ್ನೆಯ ಸಾಯಂಕಾಲದೊಳಗಾಗಿ ತಟ್ಟೆಯನ್ನು ಮಾಡಿಕೊಟ್ಟುಬಿಡಬೇಕೆಂದು ಸುಬ್ಬಾಚಾರಿಗೆ (ಅಕ್ಕಸಾಲಿ) ಹೇಳಿದ್ದೆ. ಮೊನ್ನೆಯ ಲಾಗಾಯಿತು ಸಿದ್ದನನ್ನು ಹತ್ತಾರು ಸಲ ಅವನ ಅಂಗಡಿಗೆ ಓಡಿಸಿಯೂ ಪ್ರಯೋಜನ ವಿಲ್ಲದೆಹೋಯಿತು. ನಾಳೆಯ ಸಂಜೆಯೇ ಕೊಡುವೆನೆಂದು ಹೇಳಿಬಿಟ್ಟ ನಂತೆ. ನನಗೆ ಕೋಪ ಬಹಳವಾಗಿ ಬಂದಿತು. ದೇವಸ್ಥಾನದಿಂದ ಹಿಂದಿರುಗಿ ಬರುವ ದಾರಿಯಲ್ಲಿ, ಹಾಗೆಯೇ ಅವನ ಅಂಗಡಿಗೂ ಹೋಗಿ ಜಗಳವಾಡಿಬಿಟ್ಟು ಬರೋಣವೆಂದು ಹೋದೆ. ಒಳ್ಳೆಯ ಕಾಲಕ್ಕೆ ಅವನೇ ತರಬೇಕೆಂದು ಸಿದ್ಧವಾಗಿ ಪ್ಯಾಕ್‌ಮಾಡಿಟ್ಟಿದ್ದ. ಎಲ್ಲಿ ಅವನು, ಭಾನು?

"ಇದಕ್ಕೋಸ್ಕರವೇನು ಅಮ್ಮನವರು ಎರಡು ದಿವಸಗಳಿಂದಲೂ ಎಲ್ಲರಮೇಲೆಯೂ ರೇಗಿಬೀಳುತ್ತಿದ್ದುದು!"

"ಅದಿರಲಿ, ಬಿಡೀಂದ್ರೆ. ಅವನು ಎಲ್ಲಿ, ಭಾನು ?"

"ನನಗೇನು ಗೊತ್ತು ? ನಾನು ಮನೆಗೆ ಬಂದಾಗಿನಿಂದ ಅವನನ್ನು ಕಾಣಲಿಲ್ಲವಲ್ಲಾ !"

"ಮಾಲಿನಿಯನ್ನು ಸ್ವಲ್ಪ ನೋಡಿಕೊಳ್ಳಿ ; ಭಾನೂ.... ಲೋ.. ಭಾನೂ !" ಎಂದು ತಟ್ಟೆಯನ್ನು ಬೀರುವಿನಲ್ಲಿಟ್ಟು ಬೀಗಹಾಕಿಬಿಟ್ಟು ಒಂದೊಂದು ಕೊಠಡಿಯಾಗಿ ಹುಡುಕಲಾರಂಭಿಸಿದಳು ಶಾರದೆ. ರಾಯರು ಮುದ್ದುಮಗಳನ್ನೆತ್ತಿಕೊಂಡು ಮುದ್ದಾಡುತ್ತಿದ್ದರು.

ಶಾರದೆಯು ಮನೆಯ ಪೂರ್ತಿಯೂ ಹುಡುಕಿ ನೋಡಿಯೂ ಸಹ ಭಾನು ಸಿಗಲಿಲ್ಲ. ಅಷ್ಟರೊಳಗಾಗಿ ಫುಟ್‌ಬಾಲ್‌ ಮ್ಯಾಚನ್ನು ಆಡಿಕೊಂಡು ಆಗತಾನೇ ಮನೆಗೆ ಹಿಂದಿರುಗಿ ಬಂದ ಶಶಿಧರನನ್ನು ಕೇಳಿದಳು. ಅವನೂ ಅವನನ್ನು ನೋಡಲಿಲ್ಲವೆಂದುಬಿಟ್ಟನು.

ಶಾರದೆಗೆ ಚಿಂತೆಯಿಂದ ಮೈ ಗಡಗಡನೆ ನಡುಗಲಾರಂಭಿಸಿತು. 'ಭಾನೂ, ಲೋ ಭಾನೂ ! ನನ್ನ ಚಿನ್ನಾ ! ಎಲ್ಲಿಗಮ್ಮಾ ಹೋಗಿಬಿಟ್ಟೆ ? ನಾನೊಂದು ಪೆಡೆ, ಸಂಜೆ ಸುಮ್ಮನೆ ಮಾತಿನಮೇಲೆ ಹೇಳಿದೆನಷ್ಟೆ ಅದಕ್ಕಾಗಿ ನೀನು ನಿಜವಾಗಿಯೂ ನೊಂದುಹೋಗಿಬಿಟ್ಟೆಯಾ, ನನ್ನ ರಾಜಾ ! ಇನ್ನುಮೇಲೆ ನಾನು ನಿನ್ನಮೇಲೆ ಕೋಪಿಸಿಕೊಳ್ಳುವುದೇ ಇಲ್ಲ. ಬಂದುಬಿಡು ಚಿನ್ನಾ !' ಎಂದು ಕೊರಗುತ್ತಾ ದೇವರ ಪಟವನ್ನು ನೋಡಿ '..ನಾನೇನ ಮಾಡಲಿ ದೇವಿ ! ಮಗುವನ್ನು ಕಾಪಾಡು ! ಚಾಮುಂಡೀ ತಾಯಿ'....ಎಂದು ಬಿಕ್ಕಿಬಿಕ್ಕಿ ಅಳಲು ಶುರುಮಾಡಿಬಿಟ್ಟಳು.

"ಶಶೀ ! ನೀನು ಸೈಕಲನ್ನು ಹತ್ತಿ ಹೋಗಿ ಈ ರಸ್ತೆ ರಸ್ತೆಯಾಗಿ ಹುಡುಕಿಕೊಂಡು ಬಾ" ಎಂದರು ರಾಯರು.

ಶಶಿಯು "ಅತ್ತರೆ ಏನುಪಯೋಗ ಚಿಕ್ಕಮ್ಮಾ? ಹಾಗೆ ಎಲ್ಲಿಗೂ ಹೋಗಿರಲಾರನು. ಸ್ವಲ್ಪ ಹೊತ್ತಿನಲ್ಲಿ ತನಗೆ ತಾನೇ ಹಿಂದಿರುಗಿ ಬಂದುಬಿಡುತ್ತಾನೆ, ನೋಡುತ್ತಿರು" ಎನ್ನುತ್ತಾ, ಗೋಡೆಯ ಸಮೀಪ ದಲ್ಲಿ ಒರಗಿಸಿದ್ದ ಬೈಸಿಕಲ್ಲನ್ನು ತೆಗೆಯಲು ಹೋದನು. ಕಾಲಿಗೆ ಎಡವಿದ ಗೋಣೀಚೀಲದ ಮೂಟೆಯೊಂದನ್ನು ಕಂಡು "ಏನಿದು, ಚಿಕ್ಕಮ್ಮಾ? ನಡುಮನೆಯಲ್ಲಿ ತಂದಿರಿಸಿರುವುದಲ್ಲಾ ?" ಎಂದನು.

ಶಾರದೆಯು "ಅದೇ ? ನಾಳೆಯ ದಿನ ನಮ್ಮ ಭಾನುವಿಗೆ ಹುಟ್ಟಿದ ಹಬ್ಬವಲ್ಲವೇ ? ಆಯುಷ್ಯಹೋಮ, ಹಬ್ಬದ ಅಡಿಗೆ, ಎಲ್ಲದಕ್ಕೂ ಆಗುತ್ತದೆಯೆಂದು ಐವತ್ತು ತೆಂಗಿನಕಾಯಿಗಳನ್ನು ತರಿಸಿದೆ. ಆ ದಡ್ಡ ಸಿದ್ದನು ಉಗ್ರಾಣದೊಳಗೆ ಅದನ್ನಿಡಲು ಮರೆತುಹೋಗಿ, ಇಲ್ಲಿಯೇ ಇಟ್ಟುಬಿಟ್ಟು ಹೋಗಿಬಿಟ್ಟಂತೆ ಕಾಣುತ್ತೆ......" ಎಂದು ಅಳುತ್ತಾ ನುಡಿದಳು.

ಶಶಿ "ನಾನು ತೆಗೆದುಕೊಂಡುಹೋಗಿ ಇಟ್ಟುಬರಲೇ ?" ಎಂದು ಅದನ್ನು ಹಿಡಿದು ಮೇಲಕ್ಕೆತ್ತಲು ಹೋದನು. "ಊಂ..ಅಬ್ಬಬ್ಬಾ!.. ಎಷ್ಟೊಂದು ಭಾರ"....ಎಂದ.

ತಕ್ಷಣ "ಚಿಕ್ಕಮ್ಮಾ! ಚಿಕ್ಕಮ್ಮಾ? ನಾನಿಲ್ಲೇ ಇದ್ದೀನಿ ಚಿಕ್ಕಮ್ಮಾ" ಎಂದು ಚೀಲದಿಂದ ತಲೆಯನ್ನು ಹೊರಗೆ ನೀಡುತ್ತಾ ಭಾನು ಎದ್ದು ನಿಂತನು. ಎಲ್ಲರೂ ಅವಾಕ್ಕಾದರು. ಮಗು ಮಾಲಿನಿಯು ಕಿಲಕಿಲನೆ ನಗತೊಡಗಿದಳು.

---

# ಲಾಸ್ಯ ಜೆ

"ಮಕ್ಕಳಿರಾ! ನಾಳೆಯ ದಿನ ಸಂಕ್ರಾಂತಿಯ ಹಬ್ಬವನ್ನು ಎಲ್ಲರೂ ಚೆನ್ನಾಗಿ ಕೊಂಡಾಡಿರಮ್ಮಾ, ಇದೇ ರೀತಿಯಲ್ಲಿ ನೂರಾರು ಹಬ್ಬಗಳನ್ನು ಕೊಂಡಾಡುತ್ತಾ ದೀರ್ಘಾಯುಷ್ಯವಂತರಾಗಿ ಬಾಳಿರಿ ಎಂಬುದೇ ನನ್ನ ಹಾರೈಕೆ. ನಾಡಿದ್ದು ನನಗೆ ಏನನ್ನು ತಂದುಕೊಡುತ್ತೀರಿ? ಮಕ್ಕಳಿರಾ!" ಎಂದಳು ಉಪಾಧ್ಯಾಯಿನಿ ಶ್ಯಾಮಲಾದೇವಿಯು.

"ಎಳ್ಳು, ಬಾಳೆಯ ಹಣ್ಣು, ಸಕ್ಕರೆಯ ಅಚ್ಚು ಎಲ್ಲವನ್ನೂ ತಂದುಕೊಡುತ್ತೇವೆ ಮೇಡಂ" ಎಂದು ಬಾಲಕಿಯರು ಏಕಕಂಠದಲ್ಲಿ ಕೂಗಿದರು.

ಉಪಾಧ್ಯಾಯಿನಿಯು ಹಸನ್ಮುಖಳಾಗಿ "ಬಹಳ Thanks ಮಕ್ಕಳಿರಾ! ನಿಮಗೆ ಮತ್ತೊಂದು ತಮಾಷೆಯ ವಿಷಯವನ್ನು ಹೇಳಬೇಕೆಂದಿರುವೆನು. ನಮ್ಮ ಪಾಠಶಾಲೆಯ ವರ್ಷೋತ್ಸವ ದಿವಸಕ್ಕೆ ಇನ್ನು ಒಂದು ತಿಂಗಳು ಮಾತ್ರವೇ ಇದೆ. ಆ ದಿವಸದ ವಿವಿಧ ವಿನೋದಾವಳಿಯಲ್ಲಿ (Variety Entertainment) ಭಾಗ ವಹಿಸಲು ನಮ್ಮ ತರಗತಿಯಲ್ಲಿಯೂ ಸಹ ಕೆಲವು ಹುಡುಗಿಯರಿಗೆ "ರಾಸಕ್ರೀಡಾ" ನಾಟ್ಯವನ್ನು ಹೇಳಿ ಕೊಡಬೇಕೆಂದಿರುವೆನು. ಪ್ರತಿಯೊಂದು ತರಗತಿಯ ಮಕ್ಕಳಿಗೂ ಈ ಸಂತೋಷ ಸಮಾರಂಭದಲ್ಲಿ ಭಾಗವಹಿಸಲು ಅವಕಾಶ ಕೊಡಬೇಕೆಂದು ನಮ್ಮ ಹೊಸ ಹೆಡ್ ಮೇಡಂರವರು ಇಷ್ಟಪಡುತ್ತಾರೆ. ಎಲ್ಲಿ? ನಿಮ್ಮಗಳಲ್ಲಿ ಯಾರು ಯಾರಿಗೆ ಇದರಲ್ಲಿ ಭಾಗವಹಿಸಲು ಇಷ್ಟವಿದೆ? ಕೈ ಮೇಲಕ್ಕೆತ್ತಿ ನೋಡೋಣ!" ಎಂದಳು.

ಹತ್ತು ಹುಡುಗಿಯರು ಮಾತ್ರ ಕೈ ಮೇಲಕ್ಕೆತ್ತಿದರು. ಮಿಕ್ಕವರಲ್ಲಿ ನಾಚಿಕೆಯಿಂದ ಕೆಲವರೂ, ಹೆದರಿಕೆಯಿಂದ ಕೆಲವರೂ, ಸೋಮಾರಿತನದಿಂದ ಕೆಲವರೂ ಕೈ ಮೇಲಕ್ಕೆ ಎತ್ತಲಿಲ್ಲವಾಗಿ ಉಪಾಧ್ಯಾಯಿನಿಯು "ಯಾಕಮ್ಮಾ ನೀವಾರೂ ಸೇರೋಲ್ಲವೇ" ಎಂದು ಕೇಳಿದಳು. "ಇಲ್ಲ"

ವೆಂಬುದಾಗಿ ಕೆಲವರಿಂದ ಮಾತಿನ ಮೂಲಕವೂ ಕೆಲವರಿಂದ ತಲೆಯನ್ನಲ್ಲಾಡಿಸುವಿಕೆಯಿಂದಲೂ ಉತ್ತರ ಬಂದಿತು.

ಬಳಿಕ ಶ್ಯಾಮಲಾದೇವಿಯು "ಲೀಲಾ, ಕಮಲಾ, ಸರಸಾ, ಸೀತಾ, ಮಾಲಿನೀ, ವಕುಳಾ, ಸರಸ್ವತೀ, ಶೋಭನಾ ನಿಮ್ಮೆಲ್ಲರಿಗೂ ರಾಸಕ್ರೀಡಾ ನಾಟ್ಯ ಕಲಿಸುತ್ತೇನೆ. ಮುದ್ದು ಮಾಧವಿಗೆ ಮಾತ್ರ ಭರತ ನಾಟ್ಯದ ಕೆಲವು ನೃತ್ಯಗಳನ್ನು ಕಲಿಸಿ, ಅವಳನ್ನು ಮಾತ್ರ ಪ್ರತ್ಯೇಕವಾಗಿ ಅಭಿನಯಿಸಲು ತರಪೇತುಮಾಡಬೇಕೆಂದಿರುವೆನು."

ಆಗ ಪುಟ್ಟ ಊರ್ಮಿಳೆಯ ವದನವು ಏಮಾರಿಕೆಯಿಂದಲೂ, ಅಸಮಾಧಾನದಿಂದಲೂ ಬಿಸಿ ತಗುಲಿದ ಬಾಳೆಯ ಎಲೆಯಂತೆ ಬಾಡಿತು. "ಊಂ .....ಮೇಡಂ......ನಾನೂ ಊ ?" ಎಂದು ತಲೆಯನ್ನು ಕೊಂಕಿಸಿಕೊಂಡು ಕೇಳಲಾಗಿ, ಉಪಾಧ್ಯಾಯಿನಿಯು "ತತ್, ನೀನಿರುವ ಲಕ್ಷಣಕ್ಕೆ. "ಡ್ಯಾನ್ಸ್" ನಲ್ಲಿ ನಿನ್ನನ್ನು ಸೇರಿಸಿಬಿಟ್ಟರೆ ಬಲು ಚೆನ್ನ! ಈ ಕರೀ ಮೋರೆಯನ್ನಿಟ್ಟುಕೊಂಡು ನೀನು ಒಂದು ಸಭೆಯ ಮುಂದೆ ಬಂದು ಕುಣಿದುಬಿಟ್ಟರೆ ಜೋಕಾಗಿರುವುದು!" ಎಂದು ಪರಿಹಾಸ್ಯವಾಗಿ ನುಡಿಯಲು, ಹುಡುಗಿಯರೆಲ್ಲರೂ ಕಿಲಕಿಲನೆ ನಕ್ಕರು. ಆ ಮಗುವಿನ ಹೃದಯದಲ್ಲಿ ಈ ಮೊದಲೇ ಮೊಳೆತಿದ್ದ ದುಃಖದ ಮೊಳಕೆಯು ಒಡೆದು ಎಲೆ ಬಿಡತೊಡಗಿತು. ಅವಳ ಕಣ್ಣುಗಳಿಂದ ಕಣ್ಣೀರ ಬಿಂದುಗಳೆರಡು ಉರುಳಿದವು. ಆದರೆ ಆ ಎಳೆಯ ಬಾಲಕಿಯ ದುಃಖದಲ್ಲಿ ಭಾಗ ವಹಿಸುವವರಾರೂ ಅಲ್ಲಿ ಕಂಡುಬರಲಿಲ್ಲ. ಮಾತುಕತೆಗಳು ಮುಗಿದನಂತರ ಎಲ್ಲರೂ ತಮ್ಮ ತಮ್ಮ ಮನೆಗಳಿಗೆ ತೆರಳಿದರು.

ದಾರಿಯುದ್ದಕ್ಕೂ ಮರುದಿವಸದ ಹಬ್ಬವನ್ನು ಕುರಿತು ಅವರವರ ಮನೆಗಳಲ್ಲಿ ಹಬ್ಬವನ್ನು ಯಾವ ಯಾವ ರೀತಿಯಲ್ಲಿ ನೆರವೇರಿಸಲು ನಿರ್ಧರಿಸಿರುವರೆಂಬುದನ್ನು ಕುರಿತು ಒಬ್ಬರಿಗೊಬ್ಬರು ವಿಧವಿಧವಾಗಿ ಹೇಳಿಕೊಳ್ಳುತ್ತಲೂ, ಜಂಭ ಕೊಚ್ಚಿಕೊಳ್ಳುತ್ತಲೂ ಹೋಗುತ್ತಿರಲಾಗಿ, ಊರ್ಮಿಳೆಯು ಮಾತ್ರ ಈ ತಮಾಷೆ ನುಡಿಗಳಲ್ಲಿ ಭಾಗವಹಿಸದೆ ತನ್ನಷ್ಟಕ್ಕೆ ತಾನು ಚಿಂತಾಮಗ್ನಳಾಗಿ ಹೆಜ್ಜೆಯ ಮೇಲೆ ಹೆಜ್ಜೆಯಿಡುತ್ತಿದ್ದಳು. ಉಪಾಧ್ಯಾಯಿನಿಯ ಆ ನಿಷ್ಠೂರ ವಾಕ್ಯಗಳು ಆ ಮಗುವಿನ ಮೃದು ಹೃದಯವನ್ನು ಬಹುವಾಗಿ ನೋಯಿಸಿಬಿಟ್ಟಿದ್ದವು.

"ಊಂ.... .ನಾನು....ಕ..ಪ್ಪಂ..ತೆ ಕಪ್ಪಾದರೇನೀಗ. ನನಗಲ್ಲವೇ ಕ್ಲಾಸಿನಲ್ಲಿ ಎಲ್ಲರಗಿಂತಲೂ ಹೆಚ್ಚಾಗಿ ಮಾರ್ಕ್ಸ್ ಬರುತ್ತದೆ. ಇವರು ನನ್ನನ್ನು ಡ್ಯಾನ್ಸಿಗೆ ಸೇರಿಸಿಕೊಳ್ಳದಿದ್ದರೆ ಅಷ್ಟೆ ಆಯಿತು ಮಹಾ. ಊಂ..........ದೇವರು ನನ್ನನ್ನು ಮಾತ್ರ ಯಾಕೆ ಇಷ್ಟೊಂದು ಕಪ್ಪಾಗಿ ಹುಟ್ಟಿಸಿದ?........ಮತ್ತೆ ಮಾಧವಕ್ಕನು ಬಿಳುಪಾಗಿದ್ದು ಬಿಟ್ಟರೆ ಆಗೋಯ್ತು? ಅವಳು ಶುದ್ಧ ಗುಗ್ಗು. ಒಂದು ಲೆಕ್ಕಾನೂ ಸಹ ಸರಿಯಾಗಿ ತಪ್ಪಿಲ್ಲದೆ ಮಾಡೋಕೆ ಬರೋಲ್ಲಾ, ಅವಳಿಗೆ! ಈ ಲಕ್ಷಣಕ್ಕೆ ಅವಳನ್ನೇ ಎಲ್ಲರೂ ಮುದ್ದು ಮಾಡುತ್ತಾರೆ...." ಇಂದು ಪರಿಪರಿಯಾಗಿ ಆಲೋಚಿಸುತ್ತಾ ಊರ್ಮಿಳೆಯು ತಲೆ ತಗ್ಗಿಸಿ ಕೊಂಡು ನಡೆಯುತ್ತಿದ್ದಳು.

ಮರುದಿನದ ಸಂಕ್ರಾಂತಿ ಹಬ್ಬದ ನಿಮಿತ್ತವಾಗಿ ಅಂದು ಬೆಳಗ್ಗೆಯೇ ಮುಸುರೆಯವಳು ಮನೆಯೆಲ್ಲವನ್ನೂ ಶುಭ್ರವಾಗಿ ತೊಳೆದುಬಿಟ್ಟು ಹೋಗಿದ್ದಳು. ಜವಾನ ತಿಮ್ಮನು ಬಾಗಿಲುಗಳಿಗೆ ಮಾವಿನಸೊಪ್ಪಿನ ತೋರಣಗಳನ್ನು ಕಟ್ಟುತ್ತಲಿದ್ದನು. ಮನೆಯ ಯಜಮಾನಿ ಸೀತಮ್ಮನು ನೆಲವೆಲ್ಲವನ್ನೂ ಹಸಿಯ ಹಿಟ್ಟಿನ ರಂಗೋಲಿಯಿಂದ ಅಲಂಕರಿಸುತ್ತಿದ್ದಳು. ಪಾಠಶಾಲೆಯಿಂದ ಹಿಂದಿರುಗಿದ ಬಾಲಕಿಯರೀರ್ವರೂ ಹಲಗೆ ಪುಸ್ತಕ ಗಳನ್ನು ಮೇಜಿನಮೇಲಿಡಲು ಹೋದರು. ಅದೇ ಮೇಜಿನಮೇಲೆ ಹೊಸದಾಗಿ ಹೊಲಿಸಿದ ಲಂಗಗಳೆರಡು ಅರೆತೆರದ ಕಾಗದದ ಪೊಟ್ಟಣ ಗಳಿಂದ ಅವರನ್ನು ಇಣಿಕಿ ನೋಡಲಾಗಿ ಮಾಧವಿ ಮಾಲತಿಯರೀರ್ವರೂ ಆತುರದಿಂದ "ಅಮ್ಮಾ! ಅದ್ಯಾರಿಗೆ ಅಮ್ಮಾ ಅವು?" ಎನ್ನುತ್ತಾ ಏಕಕಾಲದಲ್ಲಿ ಕಾಗದದ ಪೊಟ್ಣಕ್ಕೆ ಕೈ ಹಾಕಿದರು. ಮಗುವಾದುದರಿಂದ ಊರ್ಮಿಳೆಯು ತನ್ನ ಮನಸ್ಸಿನಲ್ಲಿ ಹುಟ್ಟಿದ್ದ ಚಿಂತೆಯನ್ನು ಮರೆತು ಆ ಹೊಸ ಲಂಗದಲ್ಲಿ ಮನಸೋತಳು.

ರಂಗೋಲೆ ಇಡುತ್ತಿದ್ದ ಸೀತಮ್ಮನು "ನಿಮಗೆ ಹಬ್ಬಕ್ಕೆಂದು ಹೊಲಿಸಿದ್ದೇನೆ. ಈಗ ತಾನೇ ದರ್ಜಿ ತಂದುಕೊಟ್ಟು ಹೋದ. ಮಾಧವೀ! ನಿನಗೆ ನೀಲೀ ಬಣ್ಣದ್ದು ಊರ್ಮಿಳೆಗೆ ಕಂದು ಬಣ್ಣದ್ದು" ಎಂದಳು.

ನೀಲಿ ಬಣ್ಣದ ಲಂಗದಮೇಲೆ ಸರಿಗೆಯ ಅಂಚು ಥಳಥಳವೆಂದು

ಹೊಳೆಯುತ್ತಲಿದ್ದಿತು. ಆದರೆ ಕಂದುಬಣ್ಣದ ಲಂಗದ ಮೇಲಿನ ಅಂಚು ಅಷ್ಟೊಂದು ಪ್ರಕಾಶವಾಗಿ ತೋರಲಿಲ್ಲ.

"ಅಮ್ಮಾ! ನನಗೂ ನೀಲೀ ಲಂಗಾನೇ ಬೇಕೇ" ಎಂದು ರಾಗ ಎಳೆದಳು ಊರ್ಮಿಳೆ.

"ಹೌದೌದು! ನಿನ್ನ ಕರೀ ಮೋರೆಗೆ ನೀಲೀ ಬಣ್ಣ ಬಹಳ ಚೆನ್ನಾಗಿರುವುದು, ಅಲ್ಲವೇ? ಅದಕ್ಕೇ ಮತ್ತೆ ನಿನಗೆ ಒಪ್ಪುವಂತಹ ಬಣ್ಣವಾಗಿ ಹುಡುಕಿ, ಕಂದು ಬಣ್ಣದಲ್ಲಿ ಹೊಲಿಸಿರುವೆನು" ಎಂದಳು.

"ಊ ಹೂಂ.. ನನಗಿದು ಬೇಡವೇ ಬೇಡ. ನೀಲೀದೇ ಬೇಕು," ಎಂದು ಮತ್ತೆ ಒತ್ತಿ ಹೇಳಿದಳು ಊರ್ಮಿಳೆ.

ಸೀತಮ್ಮನು "ದೊಡ್ಡವರು ಹೊಲಿಸಿಕೊಟ್ಟದ್ದನ್ನು ಬಾಯಿ ಮುಚ್ಚಿಕೊಂಡು ಹಾಕಿಕೊಳ್ಳಬೇಕು. ಜಾಸ್ತಿ ಹಠ ಹಿಡಿದರೆ ಅಪ್ಪನಿಗೆ ಹೇಳುತ್ತೇನೆ ಜೋಕೆ! ಅಕ್ಕನು ಚಿನ್ನದ ಗೊಂಬೆಯಂತಿದ್ದಾಳೆ. ಅವಳಿಗೇ ನೀಲಿ ಚೆನ್ನಾಗಿ ಒಪ್ಪುವುದು. ನಿನ್ನ ಮೈಗೆ, ಕಪ್ಪು ಬಣ್ಣದೊಡನೆ ಕಪ್ಪಾಗಿ ಕಾಣುವುದು" ಎಂದು ಮಗಳಮೇಲೆ ರೇಗಿಬಿದ್ದಳು.

ಮಾಧವಿಯು ತನ್ನ ನೀಲೀ ಲಂಗವನ್ನೂ, ಅದರ ಸರಿಗೆಯ ಅಂಚನ್ನೂ ಅತ್ಯಾನಂದದೊಡನೆ ತಿರುವಿ ತಿರುವಿ ನೋಡುತ್ತಿದ್ದಳು. ಊರ್ಮಿಳೆಯ ಲಂಗವು ಅನಾದರಣೆಯಾಗಿ ಮೇಜಿನ ಮೇಲೆ ಕಾಗದದ ಪೊಟ್ಟಣದೊಡನೆ ಪೊಟ್ಟಣವಾಗಿ ಬಿದ್ದಿದ್ದಿತು. ಊರ್ಮಿಳೆಯು ತನ್ನ ಅಕ್ಕನ ಕೈಯಲ್ಲಿದ್ದ ಸುಶೋಭಿತವಾದ ಆ ನೀಲೀ ಲಂಗವನ್ನೇ ಎವೆಯಿಕ್ಕದೆ ನೋಡುತ್ತಿದ್ದಳು. ಮೇಲಿಂದಮೇಲೆ ಆ ಮಗುವಿನ ಮನಸ್ಸಿಗೆ ಏರ್ಪಟ್ಟ ಏಮಾರಿಕೆಯಿಂದಲೂ ಅವಳ ಎಳೆಯ ಹೃದಯವು ವೇದನೆಯಿಂದ ಕೊರಗುತ್ತಲಿದ್ದಿತು. ಮಗುವಿನ ಹೃದಯವಲ್ಲವೇ? ಪ್ರಜ್ವಲಿಸುತ್ತಿರುವ ಆ ನೀಲೀ ವರ್ಣಜಾಲದಲ್ಲಿ ಪರವಶಳಾದಳು ಆ ಊರ್ಮಿಳೆ. ಎರಡು ಲಂಗಗಳೂ ಒಂದೇ ಖರೀದಿಯಾದ್ದಾದರೂ ಕೂಡ, ಅಕ್ಕನ ಲಂಗವೇ ಉತ್ತಮವಾದದ್ದೆಂದು ಅವಳ ಎಣಿಕೆ.

ಮಾಧವಿಯೂ, ಊರ್ಮಿಳೆಯೂ ಒಂದೇ ತರಗತಿಯಲ್ಲಿ ಓದುತ್ತಿದ್ದರು. ಅವರೀರ್ವರೂ ಅಮಾವಾಸ್ಯೆ ಪೂರ್ಣಿಮೆಯಂತೆ ಇರುವರು.

ಆದುದರಿಂದ ಅವರವರ ಮೈ ಬಣ್ಣಕ್ಕೆ ಹೋಲುವಂತಹ ವರ್ಣಗಳಲ್ಲಿ ಅವರಮ್ಮನು ಲಂಗಗಳನ್ನು ಹೊಲಿಸಿದ್ದಳು. ಆದರೆ ಆಕೆಯು ಮಕ್ಕಳ ಮನಸ್ಸನ್ನು ಚೆನ್ನಾಗಿ ಅರಿತವಳಾಗಿದ್ದರೆ, ಈ ರೀತಿ ಮಾಡುತ್ತಿರಲಿಲ್ಲ. ಆ ಎಳೆಯ ಹೃದಯಕ್ಕೆ ಇಷ್ಟೊಂದು ಬೇನೆಯನ್ನು ತಂದೊಡ್ಡುತ್ತಿರಲಿಲ್ಲ. ಈರ್ವರಿಗೂ ಕೆಂಪು ಬಣ್ಣದಲ್ಲಿಯೇ ಲಂಗ ಹೊಲಿಸಿದ್ದರೂ ಚೆನ್ನಾಗಿ ರುತ್ತಿತ್ತು.

ಮರುದಿವಸ ಸಂಜೆಯ ಸಮಯ. ಸೀತಮ್ಮನು ಮಕ್ಕಳಿಬ್ಬರಿಗೂ ಜಡೆ ಹೆಣೆದು, ಹೂ ಮುಡಿಸಿ, ಮುಖವನ್ನು ತೊಳೆದು, ಸಾದಿನ ಬೊಟ್ಟಿಟ್ಟು, ಹೊಸ ಲಂಗಗಳನ್ನೂ, ಅಂಗಿಗಳನ್ನೂ, ಆಭರಣಾದಿಗಳನ್ನೂ ತೊಡಿಸಿದಳು. ಮಾಧವಿಯು ಸಂಕ್ರಾಂತಿಯ ಎಳ್ಳು ತುಂಬಿದ ಬಟ್ಟಲು, ಕೊಬ್ಬರಿಯ ಗಿಟುಕು, ಕಬ್ಬಿನ ತುಂಡು, ತಾಂಬೂಲ—ಎಲ್ಲವನ್ನೂ ತಟ್ಟೆಯಲ್ಲಿ ತೆಗೆದು ಕೊಂಡು ಇಷ್ಟಮಿತ್ರರ ಮನೆಗಳಿಗೆ ಬೀರಲು ಹೊರಟಳು. ಊರ್ಮಿಳೆಯು ಕರ್ಪೂರದ ಗೊಂಬೆಯನ್ನು ಕಂಕುಳಲ್ಲಿ ಎತ್ತಿಕೊಂಡು ಅಕ್ಕನನ್ನು ಹಿಂಬಾಲಿ ಸಿದಳು. ಜವಾನ ತಿಮ್ಮನು ಈ ಸಾಮಗ್ರಿಗಳು ತುಂಬಲ್ಪಟ್ಟ ಬುಟ್ಟಿ ಯೊಂದನ್ನು ತಲೆಯಮೇಲೆ ಹೊತ್ತುಕೊಂಡು ಮಕ್ಕಳ ಹಿಂದೆ ಹೊರಟನು.

ಮಾಧವಿಯಂತೂ ಆ ನೀಲೀ ಬಣ್ಣದ ಜರತಾರೀ ಲಂಗದಲ್ಲಿ ರತಿ ಯಂತೆ ಶೋಭಿಸುತ್ತಿದ್ದಳು, ಊರ್ಮಿಳೆಯು ಸಾಧಾರಣವಾಗಿ ತೋರಿದಳು. ಎಳ್ಳನ್ನು ಬೀರಿಬಂದ ಮನೆಗಳ ಹೆಂಗಸರೆಲ್ಲರೂ ಮಾಧವಿಯ ಲಂಗವನ್ನು ಮುಟ್ಟಿ ಮುಟ್ಟಿ ನೋಡಿ "ಎಷ್ಟು ಚೆನ್ನಾಗಿದೆ ಲಂಗ! ಏನು ಬೆಲೆಯೋ ಇದಕ್ಕೆ" ಎಂದೊಬ್ಬಳೂ, "ಈ ಲಂಗದಲ್ಲಿ ಮಾಧವಿಯು ಅದೆಷ್ಟೊಂದು ಮುದ್ದಾಗಿ ಕಾಣುತ್ತಾಳೆ!" ಎಂದು ಮತ್ತೊಬ್ಬಳೂ, "ಬಂಗಾರದ ಬೊಂಬೆಯಂತಿದ್ದಾಳೆ ಕಣೇ, ಇಂದು ಸೀತಮ್ಮನ ಮಗಳು" ಎಂದು ಇನ್ನೊಬ್ಬಳೂ, "ಮಾಧವಿಗೆ ನೀಲೀ ಬಣ್ಣ ಬಹಳ ಚೆನ್ನಾಗಿ ಒಪ್ಪುತ್ತೆ ಕಣೆ" ಎಂದು ಬೇರೊಬ್ಬಳೂ ಈ ರೀತಿಯಾಗಿ ಸಕಲರೂ ಮಾಧವಿಯನ್ನು ಪ್ರಶಂಶಿಸಿದರೇ ವಿನಾ ಊರ್ಮಿಳೆಯನ್ನು ಯಾರೂ ಪಿಟಕ್ ಎಂದು ಮಾತನಾಡಿಸಲಿಲ್ಲ. ಅವಳ ಲಂಗದ ಬಗ್ಗೆ ಸಹ ಯಾರೂ ಕೂಡ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಲಿಲ್ಲ.

ಗಿಣಿಯಂತೆ ಮುದ್ದು ಮುದ್ದಾಗಿರುವ ಮಕ್ಕಳಿಗೆ ಎಂತಹ ಅಲಂಕಾರವನ್ನು ಮಾಡಿದರೂ ಕೂಡ ಚೆನ್ನಾಗಿಯೇ ತೋರುವುದು, ಅವರನ್ನು ಎಲ್ಲರೂ ಮುದ್ದು ಮಾಡುವರು. ಈ ಪ್ರಪಂಚದ ತತ್ವವನ್ನು ಪುಟ್ಟ ಬಾಲಕಿಯಾದ ಊರ್ಮಿಳೆಯು ತಿಳಿಯುವ ಬಗೆ ಹೇಗೆ? ಅಂತೂ ಅವಳ ಪುಟ್ಟ ಮಿದುಳಿಗೆ ಸಿಡಿಲ ಮೇಲೆ ಸಿಡಿಲು ಹೊಡೆಯಲಾಗಿ, "ನನಗೆ ಈ ಕಂದು ಬಣ್ಣದ ಲಂಗ ಬೇಡವೆಂದರೆ ಅಮ್ಮನು ಕೇಳೋಲ್ಲ. ಈಗ ನನ್ನನ್ನು ಲಕ್ಷ್ಯಮಾಡುವವರು ಯಾರು?" ಎಂದು ಭಾವಿಸಿದಳು. "ಅಂತೂ ನನ್ನನ್ನು ಏಕೆ ಹುಟ್ಟಿಸಿದನೋ" ಎಂದು ಏನನ್ನೋ ಮನಸ್ಸಿನೊಳಗೆ ಚಿಂತಿಸುತ್ತಾ ಕೊರಗುವಳು. ಆ ಪುಟ್ಟ ಬಾಲಕಿಯ ವೇದನೆಯನ್ನು ಅರಿತು, ಅವಳನ್ನು ಸಂತೈಸಲು ಯಾರೂ ಮುಂದೆ ಬರಲಿಲ್ಲ.

* * * *

ಪಬ್ಬ ಕಳೆದ ಮರುದಿನ ಪಾಠಶಾಲೆಯು ತೆರೆಯಲ್ಪಟ್ಟಿತು. ಅಂದಿನಿಂದ ಉಪಾಧ್ಯಾಯಿನಿಯಾದ ಶ್ಯಾಮಲಾದೇವಿಯು ಮಾಧವೀ-ಊರ್ಮಿಳೆಯರ ತರಗತಿಯ ಬಾಲಕಿಯರಿಗೆ ನಾಟ್ಯ ಕಲಿಸಲು ಪ್ರಾರಂಭಿಸಿದಳು. ಸಂಧ್ಯಾಕಾಲದಲ್ಲಿ ಪಾಠಶಾಲೆಯು ಮುಗಿದು ಹುಡುಗಿಯರೆಲ್ಲರೂ ಮನೆಗೆ ತೆರಳಿದ ಬಳಿಕ, ಆರು ಅಥವಾ ಆರೂವರೆ ಘಂಟೆಯವರೆವಿಗೆ ಪ್ರತಿಯೊಂದು ತರಗತಿಯಲ್ಲಿಯೂ ವಿವಿಧ ವಿನೋದಾವಳಿಗೆ ಆಯಾ ತರಗತಿಯ ಉಪಾಧ್ಯಾಯಿನಿಯರು ನಿರ್ದಿಷ್ಟವಾದ ಆಟಗಳಲ್ಲಿ ತರಬೇತು ಮಾಡಿಸುವರು. ಮಾಧವೀ ಊರ್ಮಿಳೆಯರೀರ್ವರೂ ಒಂದೇ ತರಗತಿಯಲ್ಲಿ ಓದುತ್ತಿದ್ದರಾದುದರಿಂದ ಮಾಧವಿಯು ನಾಟ್ಯವನ್ನು ಕಲಿಯಲು ನಿಂತಾಗ ಅವಳ ಜೊತೆಗೆ ಊರ್ಮಿಳೆಯೂ ಇದ್ದು 'ಪ್ರಾಕ್ಟೀಸ್' ಮುಗಿದನಂತರ ಈರ್ವರೂ ಒಟ್ಟಿಗೆ ಮನೆಗೆ ಹೋಗುವ ಪದ್ಧತಿ. ತನ್ನನ್ನು ನಾಟ್ಯಕ್ಕೆ ಸೇರಿಸಕೊಳ್ಳದಿದ್ದರೂ ಪ್ರಾಕ್ಟೀಸ್ ಹೊತ್ತಿನಲ್ಲಾದರೂ ಅಲ್ಲಿ ತಾನಿರಲು ಉಪಾಧ್ಯಾಯಿನಿಯು ಅವಕಾಶ ಕೊಟ್ಟಿರುವರಲ್ಲಾ ಎಂದು ಊರ್ಮಿಳೆಗೆ ಮಹದಾನಂದ. ಉಪಾಧ್ಯಾಯಿನಿಯು ಹುಡುಗಿಯರಿಗೆ ನೃತ್ಯ ಕಲಿಸುವುದನ್ನು ಅವಳು ಗಮನವಿಟ್ಟು ನೋಡುತ್ತಿರುವಳು.

ಮಾಧವಿಯು ನೋಡುವುದಕ್ಕಿಂತಲೂ ಬಲು ಚೆಲುವೆ. ಚತುರ್ಮುಖನು ಲೋಕದಲ್ಲಿರುವ ಸಕಲ ಸೌಂದರ್ಯರಾಶಿಯನ್ನೂ ಒಟ್ಟುಗೂಡಿಸಿ ಅವಳ ಅವಯವಗಳಲ್ಲಿ ಚೆಲ್ಲಿದ್ದನು. ಅತ್ಯಂತ ಕಲಾನೈಪುಣ್ಯವನ್ನು ಹೊಂದಿದ ಶಿಲ್ಪಿಯೋರ್ವನಿಂದ ಕಡೆಯಲ್ಪಟ್ಟ ಸುಂದರ ವಿಗ್ರಹದಂತೆ ಇದ್ದಳೆಂದರೆ ಒಪ್ಪುವುದು. ಅವಳ ಕಣ್ಮಣಿಗಳು ವಿಶಾಲವಾದ ಶುಭ್ರ ಸರೋವರಗಳಲ್ಲಿ ತೇಲಾಡುತ್ತಿರುವ ನೀಲೋತ್ಪಲ ಪುಷ್ಪಗಳಂತಿರುವುವು. ಮೃದುಮನೋಹರವಾದ ಗುಲಾಬಿಯ ಪುಷ್ಪಗಳಂತಹ ಉಬ್ಬುಗೆನ್ನೆಗಳು, ವಜ್ರಗಳಂತೆ ಮಿನುಗುತ್ತಲಿರುವ ಹಲ್ಲಿನ ವರಸೆಗಳು, ದಾಳಿಂಬ ಪುಷ್ಪಗಳಂತಹ ಕೆಂದುಟಿಗಳು, ಮಾಟವಾದ ಮೂಗು, ವಿಶಾಲವಾದ ಹಣೆ, ಪೌರ್ಣಿಮಾ ಚಂದ್ರನಂತಹ ವದನಕ್ಕೆ ದೃಷ್ಟಿಪರಿಹಾರವಾಗಿರಲೆಂದು ಇಟ್ಟಿರುವ ಸಾದಿನ ಬೊಟ್ಟು ಆ ಮುಗ್ಧ ಮನೋಹರ ವದನಕ್ಕೆ ಮತ್ತಷ್ಟು ಸೌಂದರ್ಯವನ್ನೇ ತಂದು ಪಸರಿಸುತ್ತಲಿತ್ತು. ಮಾಧವಿಯಮೇಲೆ ನಿರ್ವಂಚನೆಯಾಗಿ ಸೌಂದರ್ಯ ರಾಶಿಯನ್ನು ಚೆಲ್ಲಾಡಿದ್ದ ಬ್ರಹ್ಮದೇವರ ಸತಿಯಾದ ಸರಸ್ವತೀದೇವಿಯು ಮಾತ್ರ ಪತಿಯಮೇಲಿನ ಅಸೂಯೆಯಿಂದಲೋ ಏನೋ, ತನ್ನ ಸಂಪೂರ್ಣ ಪ್ರಭಾವವನ್ನು ಆ ಬಾಲಕಿಯ ಮೇಲೆ ಬೀರದೆಹೋದಳು. ಸೌಂದರ್ಯಮಯಿಯಾದ ಮಾಧವಿಯು ಊರ್ಮಿಳೆಯಷ್ಟು ಸೂಕ್ಷ್ಮಬುದ್ಧಿಯವಳಲ್ಲ. ಆದರೆ ಅವಳ ಚೆಲುವಿಗೆ ಮನಸೋತು ಉಪಾಧ್ಯಾಯಿನಿಯು ಅವಳಿಗೆ ಬ್ರಹ್ಮಪ್ರಯತ್ನಪಟ್ಟು ನೃತ್ಯವಿದ್ಯೆಯನ್ನು ಕಲಿಸಲಾರಂಭಿಸಿದಳು.

ಉಪಾಧ್ಯಾಯಿನಿಯು ಹುಡುಗಿಯರಿಗೆ ಮನೆಯಲ್ಲಿಯೂ ಸಹ ನಾಟ್ಯವನ್ನು 'ಪ್ರಾಕ್ಟೀಸ್' ಮಾಡಿಕೊಳ್ಳುವಂತೆ ಹೇಳಿದ್ದಳು. ಸಂಗಾತಿಯರೆಲ್ಲರೂ ಒಂದೊಂದು ದಿವಸ ಒಬ್ಬೊಬ್ಬರ ಮನೆಯಲ್ಲಿ ಕೂಡಿ ನೃತ್ಯಗಾನವನ್ನು ಅಭ್ಯಾಸ ಮಾಡಿಕೊಳ್ಳುತ್ತಲಿದ್ದರು. ಆಗಲೂ ಕೂಡ ಊರ್ಮಿಳೆಯು ಅವರೊಡನೆ ಇದ್ದು ಪ್ರತಿಯೊಬ್ಬರಿಗೂ "ಮೇಡಂ ಹೀಗೆ ಹೇಳಿಕೊಟ್ಟಿರು. ನೀವು ಆಡುವುದು ತಪ್ಪು" ಎಂದೆಲ್ಲಾ ನಟಿಸಿ ತೋರಿಸುವಳು. ಆದರೆ ಮೊಟ್ಟಮೊದಲು ಹುಡುಗಿಯರೆಲ್ಲರೂ ಅವಳಮೇಲೆ ಸಿಟ್ಟುಗೊಂಡು "ನೀನು ಮಹಾ ಬೃಹಸ್ಪತಿ," "ಸುಮ್ಮನಿರೇ ಮಹಾ,"

"ನೀನೇನೂ ನಮಗೆ ಹೇಳಿಕೊಡಲು ಬರಬೇಡ" ಎಂದು ಅವಳಮೇಲೆ ರೇಗಿಬೀಳುವರು. ಆದರೆ ಕ್ರಮೇಣ ತಾವೇ ತಾವಾಗಿ ಒಬ್ಬೊಬ್ಬರಾಗಿ ಊರ್ಮಿಳೆಯ ಹತ್ತಿರದಲ್ಲಿ ಬಂದು ಹೆಜ್ಜೆಯಿಡುವಿಕೆ, ಅಭಿನಯಿಸುವಿಕೆ, ಹಾಡುವಿಕೆ—ಮುಂತಾದುವುಗಳಲ್ಲಿ ಸಲಹೆ ಕೇಳಲಾರಂಭಿಸಿದರು.

* * * *

ಈ ಮಧ್ಯೆ ಒಂದು ಸಂಜೆ ಹುಡುಗಿಯರೆಲ್ಲರೂ ಜೂಟಾಟವಾಡುತ್ತಿರುವಾಗ ಮಾಧವಿಯು ಒಂದು ದೊಡ್ಡ ಕಲ್ಲನ್ನು ಎಡವಿ 'ಧಢಂ' ಎಂದು ಬಿದ್ದುಬಿಟ್ಟಳು. ಅದೇ ನೆಪದಲ್ಲಿ ಬಲಗಾಲ ಹೆಬ್ಬೆಟ್ಟಿನಲ್ಲಿ ದೊಡ್ಡದೊಂದು ಘಾಯವಾಗಿ, ತುಂಬ ಕೀವು ಹಿಡಿದುಕೊಂಡು ಅದರ ದೆಶೆಯಿಂದ ಮಾಧವಿಯು ವಿಪರೀತ ಖಾಯಿಲೆಯಾಗಿ ಮಲಗಿಬಿಟ್ಟಳು. ಪಾಠಶಾಲೆಯ ವಾರ್ಷಿಕೋತ್ಸವದ ದಿನವಾದರೋ ಬಹಳ ಸಮೀಪಿಸುತ್ತಲಿದ್ದಿತು. ದಿನ ಕಳೆದಹಾಗೆಲ್ಲಾ ಶ್ಯಾಮಲಾದೇವಿಗೆ ಯೋಚನೆಗಿಟ್ಟುಕೊಂಡಿತು. ರಾಸಕ್ರೀಡಾ ನೃತ್ಯಕ್ಕೆ ಸೇರಿರುವ ಹುಡುಗಿಯರಲ್ಲಿ ಒಬ್ಬಳನ್ನು ಆಯ್ದು ಅವಳಿಗಾದರೂ ಮಾಧವಿಯ ಪಾಲಿನ ನೃತ್ಯಗಾನಗಳನ್ನು ಕಲಿಸೋಣವೆಂದು ಎಣಿಸಿ ಪ್ರಯತ್ನಿಸಿದಳು. ಆದರೆ ಮಿಕ್ಕ ಹುಡುಗಿಯರು ಮಾಧವಿಗಿಂತಲೂ ಬಲು ದಡ್ಡರಾಗಿ ಕಂಡುಬಂದರು. ಮಾಧವಿಯ ನೃತ್ಯಗಾನವೇ ಆ ವಿವಿಧ ವಿನೋದಾವಳಿಗೆ ತಿಲಕಪ್ರಾಯವಾಗಿದ್ದುದರಿಂದ ಮಾಧವಿಯು ಶೀಘ್ರವಾಗಿ ಗುಣಮುಖ ಹೊಂದಬೇಕಲ್ಲಾ ಎಂದು ಉಪಾಧ್ಯಾಯಿನಿಯು ಚಿಂತಿಸುತ್ತಿದ್ದಳು.

ಕೊನೆಗೆ ದೈವಕೃಪೆಯಿಂದ ವರ್ಷೋತ್ಸವದ ಹಿಂದಿನ ದಿವಸ ಮಾಧವಿಯು ಕುಂಟುತ್ತ ಪಾಠಶಾಲೆಯಲ್ಲಿ ಹಾಜರಾದಳು. ಶ್ಯಾಮಲಾದೇವಿಗಂತೂ ಮಿತಿಮೀರಿದ ಸಂತೋಷವೇರ್ಪಟ್ಟಿತು. ಪಾಠಶಾಲೆ ಮುಗಿದನಂತರ ಶ್ಯಾಮಲಾದೇವಿ ಮಾಧವಿ ನೃತ್ಯಗಳೆಲ್ಲವನ್ನೂ ಜ್ಞಾಪಕದಲ್ಲಿಟ್ಟುಕೊಂಡಿರುವಳೇ ಎಂದು ನೋಡಲು, ಅವಳನ್ನು ಅಭಿನಯಿಸುವಂತೆ ಹೇಳಿದಳು. ಆದರೆ. . . .ಆದರೆ, ಅವಳ ನೃತ್ಯವು ಶುದ್ಧ ಅಸಂಬದ್ಧವಾಗಿದ್ದಿತು. ಮೊದಲೇ ನಾಟ್ಯದಲ್ಲಿ ಅಭಿರುಚಿ ಇರಲಿಲ್ಲ.

ಸಾಲದುದಕ್ಕೆ ಕುಂಟುತ್ತಾ ಕುಂಟುತ್ತಾ ಅವಳು ಮಾಡಿದ ಅಭಿನಯವು ಉಪಾಧ್ಯಾಯಿನಿಗೆ ಸರಿಹೋಗಲಿಲ್ಲ. ಉಪಾಧ್ಯಾಯಿನಿಯ ನಿರಾಶಾಯುತ ಮುಖವನ್ನು ಕಂಡು ಮಾಧವಿಗೆ 'ಅಯ್ಯೋ' ಎನಿಸಿತು. ತಕ್ಷಣ ಅವಳ ಮನಸ್ಸಿಗೊಂದು ಉಪಾಯವು ಮಿಂಚಿನಂತೆ ಹೊಳೆಯಿತು.

"ಮೇಡಂ, ಮೇಡಂ! ನಾನು ಹೀಗೆ ಕುಂಟುತ್ತಾ ಅಭಿನಯಿಸಿದರೆ ಸಭೆಯಲ್ಲಿ ಎಲ್ಲರೂ ನಗೋಲ್ಲವೇ? ನಮ್ಮ ಊರ್ಮಿಳೇನ ಅಭಿನಯಿಸಲು ಹೇಳಿಬಿಡಿ...." ಎಂದು ಮಾಧವಿಯು ಹೇಳಿ ಮುಗಿಸುವುದರೊಳಗಾಗಿ ಶ್ಯಾಮಲಾದೇವಿಯು "ಒಳ್ಳೇ ಆಲೋಚನೆಯೇ ನಿನ್ನದು! ಬಟ್ಲಡಿಕೆಯ ಬಣ್ಣದಂತಹ ನಿನ್ನ ತಂಗಿಯನ್ನು ರಂಗದಮೇಲೆ ಹತ್ತಿಸಿಬಿಟ್ಟರೆ ಬಲು ಚೆನ್ನಾಗಿರುವುದಿಲ್ಲವೇ?"

ಮಾಧವಿಯು ಸಿಟ್ಟಿನೊಡನೆ ಹುಬ್ಬು ಗಂಟುಮಾಡಿಕೊಂಡು "ಯಾಕೆ ಅವಳನ್ನು ಹೀಗೆ ಸುಮ್ಮನೆ ಅನ್ನುತ್ತೀರಿ ಮೇಡಂ. ಒಂದಿಷ್ಟು ನೋಡಿಬಿಟ್ಟರಾಯಿತು. ಅವಳ ಮೈ ಬಣ್ಣ ಕಪ್ಪಾದರೂ ಅವಳು ಕುರೂಪಿಯೇನೂ ಇಲ್ಲ ಮೇಡಂ...."

"ಹಾಗೆ ಮಾಡಬೇಕೆಂದರೂ ಕೂಡ ಒಂದೇ ಒಂದು ದಿನದೊಳಗಾಗಿ ಅವಳನ್ನು ತರಬೇತು ಮಾಡುವ ಬಗೆ ಹೇಗೆ ಮಾಧವೀ? ಸ್ವಲ್ಪವೂ ಹಿಂದು ಮುಂದು ಆಲೋಚಿಸದೇ ಮಾತನಾಡುವಿಯಲ್ಲೇ?"

ಸರಸ "ಮೇಡಂ, ಮೇಡಂ! ನಮಗೆ ನೀವು ಹೇಳಿಕೊಡುವುದನ್ನೇ ನೋಡಿಕೊಂಡು ಅವಳು ಬಹಳ ಚೆನ್ನಾಗಿ ಅಭಿನಯಿಸುತ್ತಾಳೆ. ಮೇಡಂ! ಮೇಡಂ!.."

ಕಮಲ "ಹಾಡಂತೂ ನಮ್ಮೆಲ್ಲರಿಗಿಂತಲೂ ಬಲು ಜೋರಾಗಿ ಹಾಡುತ್ತಾಳೆ ಮೇಡಂ.."

ಶೋಭನೆ "ಮೇಡಂ, ಮೇಡಂ! ನಾವು ಮನೇಲಿ ಪ್ರಾಕ್ಟೀಸ್ ಮಾಡುವಾಗ ಅವಳೇ ಮತ್ತೆ, ನಮಗೆ ತಪ್ಪುಗಳನ್ನು ತಿದ್ದಿಕೊಟ್ಟು, ಹಾಡುಗಳನ್ನೂ ಹೇಳಿಕೊಡುತ್ತಾಳೆ ಮೇಡಂ!.."

"ಸಾಕುಮಾಡಿ ನಿಮ್ಮ ಸರ್ಟಿಫಿಕೇಟುಗಳನ್ನು! ಊರ್ಮಿಳಾ! ಎಲ್ಲಿ 'ನಟನ ಮಾಡಿದಾ' ಎಂಬ ಹಾಡನ್ನು ಹೇಳುತ್ತಾ, ನರ್ತನ ಮಾಡು ನೋಡೋಣ" ಎಂದಳು ಉಪಾಧ್ಯಾಯಿನಿ.

ಊರ್ಮಿಳೆಯ ಮುಖವು ಅತ್ಯಾನಂದದಿಂದ ಅರಳಿತು; ಅವಳು ನಾಚಿಕೆಯನ್ನು ಸೂಚಿಸುತ್ತಾ ಅಕ್ಕನ ಕಡೆಗೆ ನೋಡಿದಳು. ಅವಳ ಅಪ್ಪಣೆಯನ್ನು ಅವಳ ಮುಖಭಾವನೆಯಿಂದ ತಿಳಿದುಕೊಂಡು, ನಾಚುತ್ತಾ ನಾಚುತ್ತಾ ಮುಂದೆ ಬಂದು ನಿಂತಳು.

ಎರಡು ಹೆಜ್ಜೆ ಮುಂದೆಗೆದಿಟ್ಟು ಉಪಾಧ್ಯಾಯಿನಿಗೆ ಕೈ ಜೋಡಿಸಿ ನಮಸ್ಕರಿಸಿದಳು. ಅದೇ ಘಳಿಗೆಯಲ್ಲಿ ಉಪಾಧ್ಯಾಯಿನಿಯೂ ಹಾರ್ಮೋನಿಯಂ ಬಾರಿಸಲು ತೊಡಗಿದಳು. ಊರ್ಮಿಳೆಯು ವೈಮರೆತವಳಾಗಿ, ಮೃದುಮಧುರವಾದ ಕಂಠದಲ್ಲಿ ಹಾಡುತ್ತಾ, ಭಾವಪರಿಪೂರ್ಣಯುತವಾದ ಭರತ ನಾಟ್ಯವನ್ನು ಅಭಿನಯಿಸಲು ತೊಡಗಿದಳು.

ಆಹಾ! ಶ್ಯಾಮಲಾದೇವಿಯು ಹೊಂದಿದ ಆನಂದಕ್ಕೆ ಕೊನೆ ಮೊದಲೇ ಇಲ್ಲ. ಅವಳು ಗಂಧರ್ವರನ್ನೂ ಸೋಲಿಸುವಂತಹ ಊರ್ಮಿಳೆಯ ಅತ್ಯದ್ಭುತವಾದ ದೈವಿಕ ನೃತ್ಯಗಾನದಲ್ಲಿ ತಲ್ಲೀನಳಾಗಿ ಹೋದಳು. "ಎಂತಹ ಪರಮಾಶ್ಚರ್ಯವಿದು! ಲೋಕಾನುಭವವನ್ನು ಸ್ವಲ್ಪವೂ ಅರಿಯದ ಈ ಸುಶಿಕ್ಷಿತಳಲ್ಲದ ಬಾಲೆಯು ಹಿಡಿಯುವ ಅಭಿನಯವು ಸುಶಿಕ್ಷಿತರಾದ ಕಲಾಕೋವಿದರನ್ನೂ ಸಹ ಮೀರಿಸುತ್ತಿರುವುದಲ್ಲಾ! ತಾನು ಅನುಭವಿಸುವುದು ಮಾತ್ರವಲ್ಲದೆ ಇತರರೂ ಅನುಭವಿಸಿ ಆನಂದಿಸುವಂತಹ ಸ್ಫೂರ್ತಿದಾಯಕವಾಗಿದೆಯಲ್ಲವೇ. ನಿಜವಾಗಿಯೂ ಈ ಬಾಲಕಿಗೆ ಕಲಾಸಿದ್ಧಿಯಾದ ಸಾಕ್ಷಾತ್ ಸರಸ್ವತೀದೇವಿಯು ಪರಿಪೂರ್ಣವಾಗಿ ಒಲಿದಿರುವಳು" ಎಂದು ಉಪಾಧ್ಯಾಯಿನಿಯ ಮನಸ್ಸಿನಲ್ಲಿ ಆಲೋಚನಾ ತರಂಗಗಳು ಉದ್ಭವಿಸಿದವು. ಆಕೆಗೂ ಮಿಕ್ಕ ಹುಡುಗಿಯರಿಗೂ ತಾವು ಕಾಣುವುದು ಕನಸೇ ನೆನಸೇ ಎಂಬ ಅರಿವೇ ಉಂಟಾಗಲಿಲ್ಲ. ಆ ಮನಮೋಹಕವಾದ, ಇಂಪಿನಿಂದೊಡಗೂಡಿದ ನೃತ್ಯಗಾನದಲ್ಲಿ ಸಕಲರೂ ತಲ್ಲೀನರಾದರು.

ಊರ್ಮಿಳೆಯು ಉಪಾಧ್ಯಾಯಿನಿಯ ಕಣ್ಣು ಸನ್ನೆಯಂತೆ ಒಂದೊಂದಾಗಿ ಉಪಾಧ್ಯಾಯಿನಿಯು ಮಾಧವಿಗೆ ಕಲಿಸಿಕೊಟ್ಟ ಎಲ್ಲ ನೃತ್ಯಗಳನ್ನೂ ಅತ್ಯಂತ ಮನೋಹರವಾಗಿ ಅಭಿನಯಿಸಿ ಮುಗಿಸಿದಳು. ಶ್ಯಾಮಲಾದೇವಿಯು ಓಡಿಹೋಗಿ ಊರ್ಮಿಳೆಯನ್ನು ತಬ್ಬಿ ಮುದ್ದಿಟ್ಟಳು.

ಊರ್ಮಿಳೆಯೂ ಸಹ, ಅದೇ ಸಮಯದಲ್ಲಿ ತನ್ನನ್ನು ಪ್ರೀತಿಸುವಂತಹ ವರೂ ಲೋಕದಲ್ಲಿ ಒಬ್ಬರಿರುವವರಲ್ಲಾ ಎಂದು ತಿಳಿದು ಹಿಗ್ಗಿದಳು.

* * * *

ಮರುದಿನ ಸಂಧ್ಯಾಕಾಲ. ಲಕ್ಷ್ಮೀ ವಿದ್ಯಾಲಯದ ದೊಡ್ಡ ಹಾಲಿನಲ್ಲಿ, ವಿದ್ಯಾಲಯದ ವಾರ್ಷಿಕೋತ್ಸವಕ್ಕೆ ಆಹ್ವಾನಿಸಲ್ಪಟ್ಟ ವಿದ್ಯಾರ್ಥಿನಿಯರ ಮಾತಾಪಿತೃಗಳೂ ಪುರದ ಪ್ರಮುಖ ವ್ಯಕ್ತಿಗಳೂ ಕಿಕ್ಕಿರಿದು ತುಂಬಿದ್ದರು. ಆ ಜಿಲ್ಲೆಯ ಡೆಪ್ಯುಟೀ ಕಮಿಷನರ್ ಸಾಹೇಬರು ಅಗ್ರಾಸನ ಪೀಠವನ್ನಲಂಕರಿಸಿದ್ದರು. ಎಲ್ಲ ಕಾರ್ಯಗಳೂ 'ಪ್ರೋಗ್ರಾಂ' ಪ್ರಕಾರವಾಗಿ ನೆರವೇರಿತು. ಕೊನೆಯ ಭಾಗವೇ ಊರ್ಮಿಳೆಯ ಭರತ ನಾಟ್ಯ.

ಕಾಲಿನ ಗೆಜ್ಜೆಗಳು ಝುನ್ ಝುನ್‌ಕಾರ ಮಾಡುತ್ತಿರಲಾಗಿ ಊರ್ಮಿಳೆಯು ಒನಪು ಒಯ್ಯಾರದೊಡನೆ ನಡೆದು ಬಂದು ಸಭೆಯ ಮುಂಭಾಗದಲ್ಲಿ ಆಸನಾರೂಢರಾಗಿರುವ ಅಧ್ಯಕ್ಷರಿಗೆ ನಮಸ್ಕರಿಸಿದಳು. ತಕ್ಷಣ ಪಕ್ಕವಾದ್ಯಗಳು ಘೋಷಿಸಲಾರಂಭಿಸಲು, ಊರ್ಮಿಳೆಯು ಕಮನೀಯವಾದ ಇಂಪು ಧ್ವನಿಯಲ್ಲಿ ಹಾಡುತ್ತಾ ಅಭಿನಯಿಸಲು ತೊಡಗಿದಳು. ಅವಳು ತನ್ನ ಸುತ್ತಮುತ್ತಲಿರುವ ಪ್ರಚಂಡ ಜನಸಂದಣಿಯನ್ನು ಗಮನಿಸದೆ, ತನ್ನ ತನುಮನವೆಲ್ಲವನ್ನೂ ಪರಿಪೂರ್ಣವಾಗಿ ನೃತ್ಯ ಲೋಕದಲ್ಲಿ ಧಾರೆಯೆರೆದವಳಾಗಿ, ಇಂಪಾಗಿ ಹಾಡುತ್ತಾ, ಭಾವ ಪರಿಪೂರ್ಣತೆಯೊಡಗೂಡಿದವಳಾಗಿ, ಅತ್ಯಂತ ಮನಮೋಹಕವಾಗಿ, ಅತ್ಯಂತ ಆಕರ್ಷಕವಾಗಿ, ಸಕಲರನ್ನೂ ಬೆರಗುಮಾಡುವಂತೆ ಅತ್ಯದ್ಭುತವಾಗಿ ಅಭಿನಯಿಸತೊಡಗಿದಳು.

ಲಲಿತಕಲೆಗಳೆಲ್ಲದಕ್ಕೂ ಅಧಿದೇವತೆಯಾದ ಸಾಕ್ಷಾತ್ ಸರಸ್ವತೀ ದೇವಿಯೇ ರಂಗಸ್ಥಳವಲ್ಲಿ ಇಳಿದು ಬಂದು ಅಭಿನಯಿಸುತ್ತಿರುವಳೋ ಎಂದು ಪ್ರೇಕ್ಷಕರೆಲ್ಲರೂ ಅವಾಕ್ಕಾದರು. ಊರ್ಮಿಳೆಯು ಒಂದೊಂದು ನೃತ್ಯವಾಗಿ ಚಿತ್ತಾಕರ್ಷಕವಾಗಿ ಅಭಿನಯಿಸುತ್ತಲಿದ್ದವಳು ಭಿಕ್ಷುಕಳ ನೃತ್ಯವನ್ನು ನಟಿಸಲು ಪ್ರಾರಂಭಿಸಿದಳು. ಅವಳು ಭಿಕ್ಷವನ್ನು ಬೇಡುವ ಘಟ್ಟವನ್ನು ಅರ್ಥಪುಷ್ಟಿಯೊಡಗೂಡಿದ ಅತ್ಯದ್ಭುತವಾದ ಚಾಕಚಕ್ಯ

ದೊಡನೆ ಅಭಿನಯಿಸಲಾಗಿ, ಸಭೆಯಲ್ಲೆಲ್ಲೆಲ್ಲಿಯೂ ' ಭೇಷ್! ಭೇಷ್!' ಎಂಬ ಜಯಜಯಕಾರವು ಹುಟ್ಟಲು, ಸಭಿಕರ ಹಣದ ಚೀಲಗಳಿಂದ ನಾಣ್ಯಗಳ ವರ್ಷವು ಝುಣಝುಣಾಕಾರದೊಡನೆ ರಂಗಸ್ಥಳದಲ್ಲಿ ಸುರಿಯ ಲಾರಂಭಿಸಿತು.

ಊರ್ಮಿಳೆಯ ಅತ್ಯದ್ಭುತವಾದ ನೃತ್ಯಗಾನವು ಮುಗಿದೊಡನೆಯೇ ೧೫ ನಿಮಿಷಗಳ ಕಾಲ ಜನರ ಕರತಾಡನವು ಗಗನವನ್ನು ಮುಟ್ಟಿತು. ಬಳಿಕ ಡೆಪ್ಯುಟೀ ಕಮಿಷನರ್ ಸಾಹೇಬರೆದ್ದುನಿಂತು ಪುಟ್ಟದೊಂದು ಉಪನ್ಯಾಸವನ್ನು ಮಾಡಿ, ಕೊನೆಗೆ ಭರತನಾಟ್ಯ ಕಲೆಯನ್ನು ಕುರಿತು ಒಂದೆರಡು ಮಾತನ್ನಾಡಿ, ಊರ್ಮಿಳೆಯ ಮನರಂಜಕವಾದ ನೃತ್ಯ ಗಾನ ವನ್ನು ಹೊಗಳಿ ಮಾತನಾಡುತ್ತಾ "ಈ ಮಗುವು ಇಷ್ಟೊಂದು ಚಿಕ್ಕ ವಯಸ್ಸಿನಲ್ಲಿ ಹಾವಾಡಿಗನು ಹಾವನ್ನು ತನ್ನ ವಶಪಡಿಸಿಕೊಳ್ಳುವಂತೆ ತನ್ನ ಅದ್ಭುತವಾದ ನೃತ್ಯಗಾನದಿಂದ ನಮ್ಮೆಲ್ಲರ ಹೃದಯವನ್ನೂ ಸೆಳೆದು ವಶಪಡಿಸಿಕೊಂಡುಬಿಟ್ಟಳಲ್ಲದೆ ನಮ್ಮ ಹಣದ ಚೀಲಗಳನ್ನೂ (ಖಾಲಿ) ಬರಿದುಮಾಡಿಬಿಟ್ಟಳು. ಇವಳು ನೃತ್ಯ ಲೋಕದಲ್ಲಿಯೇ ಹುಟ್ಟಿ ಬೆಳೆದವಳಂತೆ ಅಷ್ಟೊಂದು ಚಾಕಚಕ್ಯದಿಂದ ಅಭಿನಯಿಸಿರುವ ಜಾಣ್ಮೆ ಯನ್ನು ಕಂಡು ಬೆರಗಾಗಿ "ಲಾಸ್ಯಜೆ" ಎಂಬ ಬಿರುದನ್ನು ಕೆತ್ತಿಸಿದ ಸ್ವರ್ಣಪದಕವೊಂದನ್ನು ಇವಳಿಗೆ ಕೊಡಬೇಕೆಂದು ಉದ್ದೇಶಿಸಿರುವೆನು. ಪರಮಾತ್ಮನು ಈ ಮುಗ್ಧ ಬಾಲೆಗೆ ದೀರ್ಘಾಯುರಾರೋಗ್ಯವನ್ನು ಇತ್ತು, ಇಡೀ ಪ್ರಪಂಚಕ್ಕೇ ನೃತ್ಯರಾಣಿಯಾಗಿ ಬೆಳಗಿಸಲೆಂದು ಆಶಿಸುತ್ತೇನೆ" ಎಂದು ಹೇಳಿ ಮುಗಿಸಿ, ತನಗೆ ಹಾಕಬೇಕೆಂದು ತಂದ ಪುಷ್ಪಹಾರವನ್ನು ತೆಗೆದು ಊರ್ಮಿಳೆಯನ್ನು ಕರೆಸಿ, ಅವಳ ಕೊರಳಿಗೆ ಹಾಕಿದರು. ಕರತಾಡ ನದ ಮಧ್ಯೆ ಡೆಪ್ಯುಟೀ ಕಮಿಷನರವರ ಧರ್ಮಪತ್ನಿಯು ಊರ್ಮಿಳೆ ಯನ್ನು ಸೆಳೆದಪ್ಪಿಕೊಂಡು ನೆಟಿಕೆಮುರಿದು, ಮುದ್ದಿಟ್ಟುಕೊಂಡರು.

ಅಂದಿನಿಂದ ಕೆಸರಿನಲ್ಲಿ ಕಮಲವಿರುವುದೂ, ಮುಳ್ಳಿನ ಮಧ್ಯೆ ಗುಲಾಬಿ ಹೂ ಇರುವುದೂ, ಇದ್ದಲಿನಲ್ಲಿ ವಜ್ರವಿರುವುದೂ ಅರಿತವರಂತೆ, ನಮ್ಮ ಊರ್ಮಿಳೆಯ ಬಾಹ್ಯ ಸೌಂದರ್ಯವನ್ನು ಯಾರೂ ಲಕ್ಷಿಸದೆ, ಅವಳ ಹೃದಯದೊಳಗಿನ ಸೌಂದರ್ಯವನ್ನು ಎಲ್ಲರೂ ಮೆಚ್ಚಿ ಪೂಜಿಸಿ

ದರು! ಊರ್ಮಿಳೆಗೆ ಈಚೆಗೆ ತನ್ನನ್ನು ಕುರಿತು ಚಿಂತಿಸಬೇಕಾದ ಪ್ರಮೇಯವೇ ಏರ್ಪಡಲಿಲ್ಲ. ಮುಂಚೆ "ಕರೀ ಮೋರೆಯವಳೇ" ಎಂದು ದೂಷಿಸುತ್ತಲಿದ್ದ ಊರ್ಮಿಳೆಯ ತಾಯಿಯಾದ ಸೀತಮ್ಮನು ಇಂದು ಮಗುವು ಮನೆಗೆ ಬಂದೊಡನೆಯೇ "ಅಷ್ಟೊಂದು ಜನರು ಸೇರಿ ಮಗುವಿಗೆ ದೃಷ್ಟಿಹಾಕಿಬಿಟ್ಟರಲ್ಲಾ" ಎಂದುಕೊಂಡು, ಆರತಿಯನ್ನು ಬೆಳಗಿ, ದೃಷ್ಟಿ ತೆಗೆದು ಮಗುವನ್ನು ಹರಸಿದಳು!

# ಮಗುವಿನ ಸಮಸ್ಯೆ

"ಅಕ್ಕಾ, ಅಕ್ಕಾ! ನಾಳೆ ದೀಪಾವಳೀ ಹಬ್ಬವಂತಲ್ಲೇ! ನಮಗೆ ರಜ ಬಿಟ್ಟುಬಿಟ್ಟಿದ್ದಾರೆ. ನನಗೇನು ಹಬ್ಬದ ತಿಂಡಿ ಮಾಡಿಕೊಡುತ್ತೀಯ ಅಕ್ಕಾ?" ಎನ್ನುತ್ತಾ ಪುಟ್ಟ ಬಾಲಕನಾದ ಪ್ರಕಾಶನು ಶಿಶುವಿಹಾರದಿಂದ ಆಗತಾನೇ ಬಂದವನು ಪುಸ್ತಕದ ಚೀಲವನ್ನು ಮೇಜಿನ ಮೇಲೆ ಬಿಸಾಡಿ ಬಿಟ್ಟು ಅಕ್ಕನ ಬೆನ್ನ ಹಿಂದೆ ಬಂದು, ಅವಳ ಕೊರಳನ್ನು ಕಟ್ಟಿಕೊಂಡನು. ಹೂ ಕಟ್ಟುತ್ತಿದ್ದ ಸುರಭಿಯೂ ತಮ್ಮನನ್ನು ಬಾಚಿ ಮುದ್ದಿಟ್ಟು ತೊಡೆಯ ಮೇಲೆ ಕುಳ್ಳಿರಿಸಿಕೊಂಡಳು. ಅವಳ ವದನವು ಬಾಡಿತು. ಕಣ್ಣೀರು ಅವಳ ಗಲ್ಲಗಳ ಮೇಲೆ ವಜ್ರದ ಮಣಿಗಳಂತೆ ಉರುಳಿದವು. ಗದ್ಗದ ಸ್ವರದಲ್ಲಿ "ಇಲ್ಲಮ್ಮ ಚಿನ್ನಾ! ನಮ್ಮನೇಲಿ ಈ ಸಲ ಹಬ್ಬವಿಲ್ಲವಲ್ಲಾ" ಎಂದು ಉಸುರಿದಳು.

"ಯಾಕೆ ಅಕ್ಕಾ! ನಮ್ಮನೇಲಿ ಮಾತ್ರ ಹಬ್ಬ ಇಲ್ಲ? ನೋಡು! ಕೃಷ್ಣ, ರಾಮು, ರಾಜ ಎಲ್ಲರೂ ಜಂಬ ಕೊಚ್ಚಿಕೋತಾರೆ. ಕೃಷ್ಣನ ಮನೇಲಿ ನಾಳೆ ಅಂಬೋಡೆ, ಚಿರೋಟಿ, ಹೋಳಿಗೆ, ಖೀರು ಎಲ್ಲಾ ಮಾಡ್ತಾರಂತೆ, ಊಂ....ಮತ್ತೆ......ಮತ್ತೇ......ರಾಮೂಗೆ ಅವರಮ್ಮ ಹೊಸಾ ಹೊಸ ಕೋಟು ಹೊಲಿಸಿದ್ದಾರಂತೆ. ರಾಜನ ಮನೇಲಿ ಲಾಡು ಮಾಡಿಸ್ತಾರಂತೆ. ಊಂ....ನಮ್ಮನೇಲಿ ಮಾತ್ರ...."

"ನಿನಗೇನು ಬೇಕು ಪ್ರಕಾಶ್? ತಿಂಡಿ ತಾನೇ ಬೇಕು" ಇಗೋ ಈವಾಗಲೇ ಮಾಡಿಕೊಡುತ್ತೇನೆ. ಅವರೆಲ್ಲಾ ನಾಳೆ ತಿಂಡಿ ತಿಂದರೆ ನಿನಗೆ ಈವತ್ತೇ ಮಾಡಿಕೊಡುತ್ತೇನೆ. ಬಾ ಚಿನ್ನಾ!" ಎಂದು ಸವಿನುಡಿಗಳಿಂದ ಸಂತೈಸಿದಳು. ಪ್ರಕಾಶನು ಅತ್ಯಾನಂದಿತನಾಗಿ ಕಣ್ಣುಗಳನ್ನು ದೊಡ್ಡದುಮಾಡಿಕೊಂಡು "ಅಕ್ಕಾ, ಅಕ್ಕಾ? ಅಪ್ಪನ ಹತ್ತಿರ ಹೇಳಿ ನನಗೊಂದು ಹೊಸ ಅಂಗಿ ಹೊಲಿಸಿಕೊಡುತ್ತೀಯಾ?" ಅಂದ.

ಸುರಭಿಯು ಬಾಡಿದ ಮುಖದೊಡನೆ "ಅದೇ ಹೇಳಿದೆನಲ್ಲಾ ಚಿನ್ನಾ! ಈ ವರ್ಷ ನಮ್ಮನೇಲಿ ಹಬ್ಬ ಇಲ್ಲಾಂತ, ನೀನು ಹೊಸದು ಹೊಲಿಸಿಕೊಡೆಂದು ಕೇಳಿದೆಯೆಂದು ಅಪ್ಪನ ಕಿವಿಗೆ ಬಿದ್ದರೆ ಚೆನ್ನಾಗಿ ರೇಗಿ ಬೀಳುವರು" ಎಂದೆನ್ನುತ್ತಾ ಕಟ್ಟಿದ ಪುಷ್ಪಮಾಲೆಗಳೆರಡನ್ನೂ ತೆಗೆದುಕೊಂಡು ಹೋಗಿ ಗೋಡೆಯಲ್ಲಿ ತಗಲುಹಾಕಿದ್ದ ತನ್ನ ಪತಿಯ ಮತ್ತು ತಾಯಿಯ ಹೊಗೆಯ ಚಿತ್ರಪಟಗಳಿಗೆ ಹಾಕಿ ಅಲಂಕರಿಸಿ ಕೈ ಮುಗಿದಳು. ಭಾವನ ಪಠವನ್ನು ನೋಡಿದೊಡನೆಯೇ ಆ ಪುಟ್ಟ ಬಾಲಕನಿಗೊಂದು ಯೋಚನೆಯು ಮಿಂಚಿನಂತೆ ಹೊಳೆಯಿತು. "ಅಕ್ಕಾ! ಕೃಷ್ಣ! ರಾಜ ಎಲ್ಲರ ಭಾವಂದಿರೂ ಹಬ್ಬಕ್ಕೆ ಬಂದಿದ್ದಾರಂತೆ. ಅವರಿಗೆ ತುಂಬ ಪಟಾಕಿ, ಮತಾಪುಗಳೆಲ್ಲವನ್ನೂ ತಂದುಕೊಟ್ಟಿದ್ದಾರಂತೆ. ಯಾಕೆ ನಮ್ಮ ಭಾವಾ ಮಾತ್ರ ಬರೋಲ್ಲ? ನನಗೆ ಪಟಾಕಿ ತಂದುಕೊಡೋಲ್ಲ?

ಸುರಭಿಯು ತಟ್ಟೆಯನ್ನೂ, ದಾರದ ಉಂಡೆಯನ್ನೂ ಗೂಡಿನಲ್ಲಿ ತೆಗೆದಿಡುವ ನೆಪದಲ್ಲಿ ಮುಖವನ್ನು ಬಾಲಕನ ದೃಷ್ಟಿಪಥದಿಂದ ತಿರುಗಿಸಿಕೊಂಡು ಕಣ್ಣೀರನ್ನು ಸೆರಗಿನಿಂದ ಒರಸಿಕೊಂಡು "ನಿಮ್ಮ ಭಾವ ದೇವರ ಹತ್ತಿರ ಹೋಗಿಬಿಟ್ಟರು, ಚಿನ್ನಾ. ಅದಕ್ಕೆ ಬರೋಲ್ಲ" ಎಂದು ತಡವರಿಸಿಕೊಂಡು ನುಡಿದಳು.

ಆ ನಿಷ್ಕಳಂಕವಾದ ಮಗುವಿನ ಮನಸ್ಸಿಗೆ ಅಕ್ಕನ ವಾರ್ತೆಯು ಇತ್ಯರ್ಥವಾಗಲಿಲ್ಲ. "ಭಾವ ಬರಲಿಕ್ಕೆ ಆಗದಿದ್ದರೆ ಪಟಾಕಿ ಮತಾಪನ್ನಾದರೂ ಕೊಂಡು ಕಳುಹಬಾರದೇ?"

"ಅಯ್ಯೋ! ಈ ಸಲ ನಮ್ಮನೇಲಿ ಪಟಾಕಿ ಗಿಟಾಕಿಯೇನೂ ಬಿಡಬಾರದು. ಬಾ ತಿಂಡೀ ಮಾಡಿಕೊಡುತ್ತೇನೆ" ಎಂದು ಮಾತು ಮರೆಯಿಸಿ ಮಗುವಿನ ಕೈಯನ್ನು ಹಿಡಿದುಕೊಂಡು ಅಡಿಗೆಯ ಮನೆಗೆ ತೆರಳಿದಳು ಸುರಭಿ.

ಪ್ರಕಾಶನ ಮನಸ್ಸಿನಲ್ಲಿ ಒಂದು ರೀತಿಯಾದ ವ್ಯಾಕುಲ ಹುಟ್ಟಿತು. ಎಳೆಯ ಪ್ರಾಯವಾದರೂ ಕೂಡ ನಾಲ್ಕು ತಿಂಗಳಿಗೆ ಹಿಂದೆ ಅವನ ಮಾತೆಯು ಮರಣಹೊಂದಿದ ಸಂಭವವು ಅವನ ನೆನಪಿಗೆ ಬಂದಿತು. ಅವನ ಮತ್ತು ಸುರಭಿಯ ತಂದೆಯೂ ಅವರ ತಾಯಿಯ ಮರಣದ

ಬಳಿಕ ಸದಾಕಾಲವೂ ಚಿಂತೆಯಲ್ಲಿಯೇ ಮಗ್ನರಾಗಿರುವುದೂ, ಅವರಿಬ್ಬರ ಮೇಲೂ ಸಣ್ಣಪುಟ್ಟ ತಪ್ಪಿತಗಳಿಗೆಲ್ಲಾ ರೇಗಿಬೀಳುವುದೂ ಒಂದೊಂದಾಗಿ ಆ ಮಗುವಿನ ಜ್ಞಾಪಕಕ್ಕೆ ಬಂದಿತು. "ಹೌದು, ಅಕ್ಕ ಹೇಳುವುದು ನಿಜ. ಅಪ್ಪನನ್ನು ಹೊಸ ಅಂಗಿ ಹೊಲಿಸಿಕೊಡೆಂದು ಕೇಳುವುದು ತಪ್ಪು. ಹೊಸ ಅಂಗಿಗೆ ಬದಲು ಏಟು ಕೊಡುತ್ತಾನೆ ಅಷ್ಟೆ" ಎಂದುಕೊಂಡು ತನಗೆ ತಾನೇ ಸಮಾಧಾನ ತಂದುಕೊಂಡನು.

ಪ್ರಕಾಶನ ತಂದೆಯಾದ ವಾಸುದೇವರಾಯರು ಬೆಂಗಳೂರಿನಲ್ಲಿ ಸಬ್‌ಜಡ್ಜರಾಗಿದ್ದರು. ಅವನ ಸಹೋದರಿ ಸುರಭಿಗೆ ಇನ್ನೂ ಹದಿನೈದು ವರ್ಷಗಳೂ ಸಹ ತುಂಬಿಲ್ಲ. ಅವಳೊಬ್ಬ ಬಾಲ ವಿಧವೆ. ಅವಳು ಹೀಗೆ ಆದಾಗಿನಿಂದ ಅದೇ ವೇದನೆಯಲ್ಲಿ ಅವಳ ಮಾತೆಯು ಕೊರಗಿ ಕೊರಗಿ ಹಾಸಿಗೆ ಹಿಡಿದು ಮಲಗಿ ಪರಲೋಕವನ್ನೈದಿದಳು. ಪತ್ನೀವಿಯೋಗದಿಂದುಂಟಾದ ಅಸಹನೀಯವಾದ ವಿಯೋಗದುಃಖದಿಂದಲೋ ಏನೋ ಜಡ್ಜರು ಆ ತಬ್ಬಲಿ ಮಕ್ಕಳನ್ನು ಹೆಚ್ಚಾಗಿ ಗಮನಿಸಿಕೊಳ್ಳುತ್ತಿರಲಿಲ್ಲ. ಅವರನ್ನು ನೋಡಿದಾಗಲೆಲ್ಲಾ ಬೈಗಳ ಮಳೆಯನ್ನು ಸುರಿಸುತ್ತಿದ್ದರಷ್ಟೆ. ಆ ತಬ್ಬಲಿಗಳು ಒಬ್ಬರಿಗೊಬ್ಬರು ಆಧಾರವಾಗಿ ಅತ್ಯಂತ ಅನುರಾಗದಿಂದ ಇರುತ್ತಿದ್ದರು.

ಸ್ವಲ್ಪ ಹೊತ್ತಿಗೆಲ್ಲಾ ಕೋರ್ಟಿನಿಂದ ಹಿಂದಿರುಗಿದ ರಾಯರು ಮೋಟಾರಿನಿಂದಿಳಿದು "ಸುರಭೀ, ಸುರಭೀ! ಲೋ, ಪ್ರಕಾಶ್" ಎಂದು ಕೂಗುತ್ತಾ ಒಳಗೆ ಬಂದರು. ಪ್ರಕಾಶನು ಆನಂದೋತ್ಸಾಹದೊಡನೆ ಚಿಮ್ಮುತ್ತಾ ನೆಗೆಯುತ್ತಾ ಓಡಿಬಂದು ತಂದೆಯ ಕೈಯನ್ನು ಹಿಡಿದುಕೊಂಡು "ಅಪ್ಪಾ, ನಾಳೆ ಹಬ್ಬ ಅಲ್ಲವೇ! ಅದಕ್ಕೆ ಮತ್ತೆ ಅಕ್ಕಾ ನನಗಾಗಿ ತಿಂಡೀ ಮಾಡುತ್ತಿದ್ದಾಳೆ" ಎಂದು ಮುದ್ದು ಮುದ್ದಾಗಿ ನುಡಿದನು. ರಾಯರಿಗೆ ಮಿತಿಮೀರಿದ ಕೋಪವುಂಟಾಯಿತು. ದಡದಡನೆ ಅಡಿಗೆಮನೆಯ ಹೊಸಲ ಹತ್ತಿರ ಬಂದು ನಿಂತು, "ಲೋ ನಾರ್ಣಪ್ಪಾ, ನಾರ್ಣಪ್ಪಾ, ಆ ತಿಂಡಿಯೆಲ್ಲವನ್ನೂ ಈಕ್ಷಣ ತೆಗೆದುಕೊಂಡುಹೋಗಿ ಕಸದ ಡಬ್ಬದಲ್ಲಿ ಸುರಿದು ಬಾ, ತಿಂಡಿಯಂತೆ! ಹಬ್ಬವಂತೆ!" ಎಂದು ಘರ್ಜಿಸಿದರು. ಮಗುವು ಥರಥರನೆ ನಡುಗತೊಡಗಿದನು. ಸುರಭಿಗಂತು

ಆ ದುಃಖವು ಗಂಟಲನ್ನು ಬಿಗಿಯಿತು. "ಯಾಕಪ್ಪಾ ಹೀಗೆ ರೇಗು ತ್ತೀಯಾ, ನಾನು ಹಬ್ಬಕ್ಕೆಂದೇನೂ ತಿಂಡೀ ಮಾಡಲಿಲ್ಲಪ್ಪಾ, ಸುಮ್ಮನೇ ಮಗೂಗಾಗಿ ಮಾಡಿದೆ ಅಷ್ಟೆ" ಎಂದು ಮೆಲ್ಲನೆ ನುಡಿದಳು. "ಎಲ್ಲಾ ಗೊತ್ತು, ಬಾಯಿ ಮುಚ್ಚೇ. ತಲೆಯೆಲ್ಲಾ ಹರಟಬೇಡ. ಸುಮ್ಮನೆ ಕೈತೊಳೆದುಕೊಂಡು ಒಳಗೆ ಬಾ" ಎಂದು ರಾಯರು ಪ್ರತ್ಯುತ್ತರವಿತ್ತು ಹುಡುಗನ ಕೈ ಹಿಡಿದೆಳೆದುಕೊಂಡು ಹೊರಟುಹೋಗಲಾಗಿ ನಾರ್ಣಪ್ಪ ಕಣ್ಣುಕಣ್ಣುಬಿಡುತ್ತಾ ಹೋಳಿಗೆಗೆಂದು ಸುರಭಿಯು ಲಟ್ಟಿಸುತ್ತಿದ್ದ ಹಪ್ಪಳ ಗಳನ್ನೂ, ಹಿಟ್ಟಿನುಂಡೆಗಳನ್ನೂ ತಾನು ಕರಿಯುತ್ತಿದ್ದ ಪೂರಿಗಳನ್ನೂ ತಟ್ಟೆಯೊಂದರಲ್ಲಿ ಬಾಚಿ ತೆಗೆದುಕೊಂಡು ಹೋಗಿ ಕಸದ ಡಬ್ಬದಲ್ಲಿ ಚೆಲ್ಲಿ ಬಂದನು.

"ಅಯ್ಯೋ, ಭಗವಂತಾ! ಆ ಮಗುವೇನು ಪಾಪಮಾಡಿತು? ಎಲ್ಲಾ ನಮ್ಮ ಹಣೇಬರಹ ಹಾಗಿದ್ದರೆ....ಹಬ್ಬವಿಲ್ಲದಿದ್ದರೆ ಸುಮ್ಮನೆ ಭಕ್ಷ್ಯಕೂಡ ಮಾಡಬಾರದೇನು" ಎಂದು ಗೊಣಗುತ್ತ ಸುರಭಿಯು ಕೈ ತೊಳೆದುಕೊಳ್ಳಲು ಬಚ್ಚಲುಮನೆಗೆ ಹೋದಳು.

ರಾತ್ರಿ ಸುರಭಿಯು ತಮ್ಮನನ್ನು ಹಾಸಿಗೆಯಲ್ಲಿ ಮಲಗಿಸಿಕೊಂಡು ತಟ್ಟುತ್ತಾ, "ಚಿನ್ನಾ, ಸುಮ್ಮನೇ ಅಳಬಾರದಪ್ಪಾ. ಈಗತಾನೇ ನಮ್ಮ ಅಮ್ಮನು ದೇವರ ಹತ್ತಿರ ಹೋದಳಲ್ಲವೇ, ಆದ್ದರಿಂದ ನಮ್ಮನೇಲಿ ಯಾವ ವಿಶೇಷವನ್ನೂ ಮಾಡಬಾರದೂಂತ ಅಪ್ಪ ಹೇಳುತ್ತಾರಷ್ಟೆ. ಬರೋ ವರ್ಷ ನಿನಗೆ ಹೊಸಾ ಅಂಗಿ ಎಲ್ಲಾ ಹೊಲಿಸಿ, ಜೋರಾಗಿ ಲಾಡು, ಚಿರೋಟಿ ಮಾಡಿಸಿ, ನಿನಗೆ ತುಂಬಾ ಪಟಾಕಿ, ಮತಾಪು ಎಲ್ಲಾ ಕೊಂಡುಕೊಟ್ಟು ಹಬ್ಬಮಾಡೋಣ" ಎಂದು ಸಂತೈಸಿದಳು. ಆ ಸಣ್ಣ ಹುಡುಗಿಯಲ್ಲಿದ್ದ ಸಹನೆ ಲೋಕಾನುಭವವನ್ನು ಹೊಂದಿದ ರಾಯರಲ್ಲಿ ಕಂಡುಬರಲಿಲ್ಲ. ಅಕ್ಕನ ಈ ಮಾತುಗಳಾವುವೂ ಆ ಎಳೆಯ ಮಗುವಿನ ಮನೋವೇದನೆ ಯನ್ನು ಶಮನಮಾಡಲಾರದೇ ಹೋದುವು. ಅವನು ಅತ್ತೂ ಅತ್ತೂ ಬಳಲಿಹೋಗಿ ಊಟ ಸಹಾ ಮಾಡದೆ ನಿದ್ದೆಹೋದನು.

* * * *

ಒಂದೆರಡು ತಿಂಗಳುಗಳು ಕಳೆದುವು. ಪ್ರಕಾಶನ ತಂದೆಯು ಯಾವುದೋ ಕೆಲಸದ ನಿಮಿತ್ತವಾಗಿ ಪದೇಪದೇ ಇತರ ಊರುಗಳಿಗೆ ಹೋಗಿಬರುತ್ತಲಿದ್ದರು. ಇವರ ಮನೆಗೂ ಒಬ್ಬಿಬ್ಬರು ಗಣ್ಯ ಪುರುಷರು ಬಂದು ಅವನ ತಂದೆಯೊಡನೆ ಮಾತನಾಡಿ ಹೋಗುತ್ತಿದ್ದರು. ಒಂದು ದಿನ ಪ್ರಕಾಶನು ಪಾಠಶಾಲೆಯಿಂದ ಮನೆಗೆ ಹಿಂತಿರುಗಿದಾಗ ಅವನ ತಂದೆಯು ಚಾಪೆಯ ಮೇಲೆ ಕುಳಿತು ಒಬ್ಬ ರತ್ನಪಡಿ ವ್ಯಾಪಾರಿಯೊಡನೆ ಕೆಲವು ಪ್ರಜ್ವಲಿಸುವ ಒಡವೆಗಳನ್ನು ಬೆಲೆ ಮಾತಾಡುತ್ತಿದ್ದುದನ್ನು ಪ್ರಕಾಶನು ಗಮನಿಸಿದನು. ಸಂತೋಷದಿಂದ ಕುಣಿದಾಡುತ್ತಾ ಅಕ್ಕನಿದ್ದ ಕೊಠಡಿಗೆ ಹೋಗಿ, "ಅಕ್ಕಾ, ಅಕ್ಕಾ, ಅಪ್ಪ ನನ್ಗೇನೋ ಕೊಳ್ಳುತ್ತಿದ್ದಾರಲ್ಲೇ? ಅದು ಯಾರಿಗೇ? ನಿನಗೇ ತಾನೇ ಕಣೇ?" ಎಂದು ಆತುರದಿಂದ ಕೇಳಿದ. ಒಂದೆರಡು ನಿಮಿಷ ಕಾದಿದ್ದು ಅಕ್ಕನಿಂದ ಉತ್ತರ ಹೊರಡದಿರಲು, "ಏನು ಸುಮ್ಮನೇ ನಿಂತಿದ್ದೀ, ನಿನಗೇನೂ ಗೊತ್ತಿಲ್ಲ ಹೋಗು" ಎಂದನು. ಅಷ್ಟರೊಳಗಾಗಿ ಅವನ ತಂದೆಯು ಒಡವೆಗಳನ್ನು ಕೊಂಡು ತಂದು ಸುರಭಿಗೂ ಸಹ ತೋರಿಸದೆ, ಕಬ್ಬಿಣದ ಪೆಟ್ಟಿಗೆಯಲ್ಲಿಟ್ಟು ಬೀಗಹಾಕಿದುದನ್ನು ಕಂಡು ಪ್ರಕಾಶನು ಆಶ್ಚರ್ಯಹೊಂದಿದನು. ಅವನಿಗೇನೊಂದೂ ಬಗೆಹರಿಯಲಿಲ್ಲ.

ಅಂದು ಬೆಳಗ್ಗಿನಿಂದ ಪ್ರಕಾಶನ ಮನೆಯಲ್ಲಿ ಕೋಲಾಹಲವೋ ಕೋಲಾಹಲ. ಇಷ್ಟಮಿತ್ರ ಬಂಧುವರ್ಗದವರು ಊರೂರಿಂದ ಬಂದು ನೆರೆಯುತ್ತಿದ್ದರು. ತಳಿರು ತೋರಣಗಳಿಂದಲೂ, ವಿವಿಧ ವರ್ಣ ಬಾವುಟಗಳಿಂದಲೂ ಬಾಳೇ ಕಂಬಗಳಿಂದಲೂ ಮನೆಯು ಸರ್ವಾಲಂಕಾರ ಭೂಷಿತವಾಗಿ ಮೆರೆಯುತ್ತಿತ್ತು. ಮನೆಯೆಲ್ಲವೂ ತೊಳೆಯಲ್ಪಟ್ಟು ಹಿಟ್ಟಿನ ರಂಗೋಲಿಯಿಂದ ಬೆಳಗುತ್ತಲಿತ್ತು.

ಪ್ರಕಾಶನ ಪ್ರಶ್ನೆಗಳಿಗೆ ಸುರಭಿಯು ಉತ್ತರವೀಯದೆ ಕಣ್ಣೀರಿಡುತ್ತಿದ್ದಳು. ಆ ಹಸುಳೆಗೆ ಏನೂ ಅರ್ಥವಾಗಲೇ ಇಲ್ಲ. ತಂದೆಯವರನ್ನು ಕೇಳಲು ಧೈರ್ಯವಾಗಲಿಲ್ಲ. ಅಂದು ಸಂಜೆಯೇ ಅವರ ಸೋದರತ್ತೆಯೂ ರೈಲಿನಲ್ಲಿ ಬಂದಿಳಿದಳು. ಅದೇ ತಕ್ಕ ಸಮಯವೆಂದು ಪ್ರಕಾಶ್, "ಅತ್ತೇ, ನಮ್ಮನೇಲಿ ಏನತ್ತೆ ವಿಶೇಷ?" ಎಂದು ಪ್ರಶ್ನಿಸಿದನು.

"ನಮ್ಮನೇಲಿ ನಾಳೇ ಮದುವೆ ಮಗು." "ನಮ್ಮಕ್ಕಂಗಾ?" ಎಂದು ಆನಂದದಿಂದ ಕೇಳಿದ ಪ್ರಕಾಶ್. "ಅಯ್ಯೋ! ಈ ಜನ್ಮದಲ್ಲಿ ನಿಮ್ಮಕ್ಕಂಗೆ ಮದುವೆಯೆಲ್ಲಿಯದೋ! ನಿಮ್ಮ ಭಾವ ದೇವರ ಹತ್ತಿರ ಹೋಗಿಬಿಟ್ಟರಲ್ಲಾ. ನಿಮ್ಮಪ್ಪನಿಗೆ ಮದುವೆ." "ಮತ್ತೆ..? ಮತ್ತೆ ನಮ್ಮಮ್ಮಾನು ದೇವ್ರಹತ್ರ ಹೋಗ್ಬಿಟ್ಟಿಲ್ಲಾ?" "ನಿಂಗೆ ಚಿಕ್ಕಮ್ಮಾ ಆಗೋವಳೂ ಅವಳ ಸಂಬಂಧೀಕರೂ ಎಲ್ಲರೂ ಇದೀಗ ರೈಲಿನಲ್ಲಿ ಬಂದಿಳೀತಾರೆ. ಕಂದಮ್ಮಾ, ನಿನ್ನ ಒಗಟೆಯನ್ನು ಬಿಡಿಸಲು ನನ್ನಿಂದ ಸಾಧ್ಯವೆ? ನಮ್ಮ ಸ್ವರ್ಣಪುತ್ಥಳಿಗಳಂತಹ ಮಕ್ಕಳನ್ನಿಟ್ಟುಕೊಂಡು ಸಂತೋಷವಾಗಿ ಕಾಲ ಕಳೆಯುವುದನ್ನು ಬಿಟ್ಟು, ಈ ವೃದ್ಧಾಪ್ಯದಲ್ಲಿ ದೇವರೇಕೆ ಅಣ್ಣನಿಗೆ ಇಂತಹ ಬುದ್ಧಿಯನ್ನು ಕೊಟ್ಟನೋ ಕಾಣೆ" ಎಂದು ಹಲುಬಿದಳು.

---

# ಕರ್ಪೂರದ ಗೊಂಬೆ

೧

ಸರಸನ ಮನೆಯಲಿ ಅರಗಿನ ಗೌರಿಗೆ,
ಮೊರದಲಿ ಬಾಗಿನ ಇರಿಸಿಹರು,
ಅರಸಿನ ಕುಂಕುಮ ಕರಿಮಣಿ ಓಲೆಯು
ಸರಸರವಾಗಿದೆ ಮೊರದೊಳಗೇ,

ಎಂಬ ಶ್ರೀಮಾನ್ ಜಿ. ಪಿ. ರಾಜರತ್ನಂರವರ ಮಕ್ಕಳ ಹಾಡಿನಂತೆ ನಮ್ಮ ಸುಪ್ರಭೆಯ ಮನೆಯಲ್ಲಿ ಅಂದು ಗೌರಿಯ ಹಬ್ಬದ ಸಡಗರವೋ ಸಡಗರ. ಆದರೆ ಅಂದು ನೈಜವಾದ ಗೌರಿಯ ಹಬ್ಬವಲ್ಲ. ಸುಪ್ರಭೆಯೂ, ಅವಳ ಸಂಗಾತಿಯರೂ ಕೂಡಿ ಸುಪ್ರಭೆಯ ಮನೆಯ ವರಾಂಡದಲ್ಲಿ ಕಲ್ಪಿಸಿಕೊಂಡು ಆಡುತ್ತಲಿದ್ದ ಗೌರಿಯ ಹಬ್ಬವೇ ಅದು. ದೊಡ್ಡದೊಂದು ಬೆಣಚುಕಲ್ಲೇ ಗೌರಿ. ಸುಪ್ರಭೆಯ ಪುಟಾಣಿ ಕುರ್ಚಿಯೇ ಮಂದಾಸನ. ಮಲ್ಲಿಗೆಯ ಎಲೆಯೇ ವೀಳೆಯದೆಲೆ. ಸಣ್ಣ ಪುಟ್ಟ ಕಲ್ಲುಗಳೇ ಅಡಿಕೆಯಾಗಿಯೂ, ಮರಳು ಸಕ್ಕರೆಯಾಗಿಯೂ ಅವರ ಮನೆಯ ಹಿತ್ತಲಲ್ಲಿದ್ದ ನೆಲ್ಲೀ ಮರದಿಂದ ಉದುರಿದ ನೆಲ್ಲೀಕಾಯಿಗಳೇ ತೆಂಗಿನ ಕಾಯಿಗಳಾಗಿಯೂ ಪರಿಣಮಿಸಿದುವು. ಆ ಪುಟ್ಟ ಮಕ್ಕಳ ಕಲ್ಪನಾ ಲೋಕವೆಲ್ಲಿ! ಮಕ್ಕಳ ಕಲ್ಪನಾ ಶಕ್ತಿಯ ಅದ್ಭುತವೇ ಅದ್ಭುತ. ಅವರುಗಳು ಬೆಳೆಯುತ್ತಾ ಬೆಳೆಯುತ್ತಾ ಅವರ ಕಲ್ಪನಾ ಶಕ್ತಿಯೂ ಸಹ ನಶಿಸುತ್ತಾ ಬರುತ್ತವೆ. ಅವರು ಮನಸ್ಸಿಟ್ಟ ಮಾತ್ರದಲ್ಲಿ ಕೈ, ಕಾಲು, ಮುಖವೇನೂ ಇಲ್ಲದ ತಲೆಯದಿಂಬೂ ಸಹ ಮಗುವಾಗಿ ಪರಿಣಮಿಸುತ್ತದೆ. ಅದನ್ನು ತೆಗೆದು ಮುದ್ದಾಡಿ, ತಮ್ಮ ತಮ್ಮಯ್ಯನ ತೊಟ್ಟಿಲಲ್ಲಿ ಮಲಗಿಸಿ ತೂಗಾಡುವಾಗ ಅವರ ಮನಸ್ಸಿಗೆ ಆ ದಿಂಬು ನಿಜವಾಗಿಯೂ ಜೀವಕಳೆ ಹೊಂದಿದ ಮಗುವಿನೋಪಾದಿಯಲ್ಲಿಯೇ ಇರುವುದು. ತಂದೆಯ ವೇಸ್ಟ್ ಪೇಪರ್ ಬ್ಯಾಸ್ಕೆಟ್ಟ (Waste paper basket) ನ್ನು ತಮ್ಮ ಹಡಗನ್ನಾಗಿ ನಿಮಿಷ ಮಾತ್ರದಲ್ಲಿ ಪರಿವರ್ತನೆ ಗೊಳಿಸಿಬಿಡುವರು.

ತಂದೆಯು (Walking Stick) ಊರುಗೋಲನ್ನು ಕುದುರೆಯಾಗಿ ಉಪಯೋಗಿಸುವರು. ಆಗ ತಾವು ನಿಜವಾದ ಕುದುರೆಯಮೇಲೆ ಸವಾರಿಮಾಡುವಂತೆಯೇ ಭಾವಿಸುವರು.

ಮಕ್ಕಳ ಪ್ರಪಂಚವೇ ಅದೊಂದು ಅದ್ಭುತವಾದ ಲೋಕ. ಅದೊಂದು ನಿರ್ಮಲವಾದ ತಿಳಿನೀರಿನ ತಟಾಕದಂತಹ ಪರಿಶುದ್ಧವಾದ ಪ್ರಪಂಚ. ಆನಂದಮಯವಾದದ್ದು, ಅಮೃತಮಯವಾದದ್ದು. ಬಡತನ ವೆಂಬ ಬೇಗೆ, ರೋಗ, ದುಃಖ, ಕಳ್ಳತನ, ದರೋಡೆ, ಅಸೂಯೆ, ಅಹಂಕಾರವೆಂಬುವೇ ಮೊದಲಾದ ನಿಷ್ಠೂರಗಳೇನೂ ಆ ಪ್ರಪಂಚದಲ್ಲಿ ಸುಳಿವುದಿಲ್ಲ. ಮಕ್ಕಳ ಮುಗ್ಧ ಮನೋಹರ ವದನಗಳನ್ನು ನೋಡಿ ದಾಕ್ಷಣ ನಮ್ಮ ಸಕಲ ಕಷ್ಟ ದುಃಖಗಳನ್ನೂ ಮರೆಸುವ ಅದ್ಭುತ ಶಕ್ತಿ ಯನ್ನು ಪರಮಾತ್ಮನು ಅವರಿಗೆ ಕೊಟ್ಟಿರುವನು.

ಅಂದು ಭಾನುವಾರ, ಪಾಠಶಾಲೆಯಿಲ್ಲ. ಬೆಳಗ್ಗೆ ಒಂಬತ್ತು ಘಂಟೆಯ ಸಮಯ. ಮಕ್ಕಳೆಲ್ಲರಿಗೂ ಪಾಠಶಾಲೆಯೆಂಬ ಬಂದೀಖಾನೆ ಯಿಂದ ಬಿಡುಗಡೆಯ ದಿವಸವದು. ಸುಪ್ರಭೆಯೂ ಅವಳ ನೆರೆಮನೆಯ ಹುಡುಗಿಯರಾದ ಲಲಿತೆಯೂ, ಸ್ವರ್ಣಲತೆಯೂ ಅತಿ ಮನೋಹರವಾಗಿ ಗೌರಿಯ ಹಬ್ಬದ ಆಟವನ್ನು ಆಡುತ್ತಲಿದ್ದರು. ನಾಲ್ಕೈದು ಪುಟಾಣಿ ಮುಚ್ಚಲುಗಳಲ್ಲಿ (ಸಣ್ಣ ಮೊರಗಳು) ಕಾಗದವನ್ನು ಮಡಿಸಿ ರವಿಕೆ ಯೆಂದೂ, ತಮ್ಮ ಕಲ್ಪನಾಶಕ್ತಿಯಿಂದ ಉಂಟಾದ ಎಲೆಯಡಿಕೆ ಕುಂಕು ಮಾದಿ ಮಂಗಳ ದ್ರವ್ಯಗಳನ್ನೂ ಇಟ್ಟು ಗೌರಿಯ ಮುಂದೆ ಬಾಗಿನಗಳನ್ನು ಜೋಡಿಸಿ ಮಡಗಿದ್ದರು. ಆದರೆ ಸುಪ್ರಭೆಯ ಮನೆಯ ಹೂದೋಟದಲ್ಲಿ ನಿಜವಾದ ಹೂಗಳಿಗೇನೂ ಅಭಾವವಿರಲಿಲ್ಲವಾಗಿ ಗೌರಮ್ಮನನ್ನು ಹುಡುಗಿ ಯರು ಮನದಣಿಯೆ ಪೂಜಿಸಿ ಅಂದವಾಗಿ ಅಲಂಕರಿಸಿದ್ದರು. ಪೂಜೆಯು ಮುಗಿದು ಸ್ವರ್ಣಲತೆಯೂ, ಸುಪ್ರಭೆಯೂ ಗೌರಮ್ಮನಿಗೆ ಆರತಿ ಬೆಳಗಲು ಲಲಿತೆಯು ಶಿಶುವಿಹಾರದಲ್ಲಿ ಕಲಿತ "ಸರಸನ ಮನೆಯಲಿ ಅರಗಿನ ಗೌರಿಗೆ" ಎಂಬ ಪುಟ್ಟ ಹಾಡನ್ನು ಕಿರುಧ್ವನಿಯಲ್ಲಿ ಪ್ರಾರಂಭಿಸಿದಳು.

ಆ ಮಕ್ಕಳ ಮನೋಹರವಾದ ಆಟವನ್ನು ಕೆಡಿಸಲು ಬಂದವನಂತೆ ಅಂಚೆಯವನು 'ಪೋಸ್ಟ್, ಸಾರ್ ಪೋಸ್ಟ್!' ಎಂದು ಸುಪ್ರಭೆಯ

ಮನೆಯ ಮುಂಭಾಗದಲ್ಲಿರುವ ಆ ವರಾಂಡದ ಹತ್ತಿರದಲ್ಲಿ ಬಂದು ನಿಂತು ಕೂಗಿದನು. ಸುಪ್ರಭೆಗೆ ಅಂಚೆಯುವನಿಂದ ಪತ್ರವನ್ನು ಪಡೆಯಬೇಕೆಂದರೆ ಅದೊಂದು ಆಶೆ. ಸರಿ, ಆಟ ಅಷ್ಟಕ್ಕೇ ಕೊನೆಗಂಡಿತು. "ಜಿಂಗ್" ಎಂದು ನೆಗೆದು ಓಡಿ ಹೋಗಿ ಟಪಾಲಿನವನ ಹತ್ತಿರದಿಂದ ಕಾಗದವನ್ನು ಪಡೆದು, ಆಫೀಸು ರೂಮಿಗೆ ಒಂದೇ ಸಮನೆ ಓಡಿದಳು. "ಅಪ್ಪಾ, ಟಪಾಲು" ಎಂದು ಕೂಗುತ್ತಾ ರಾಯರ ಕೈಯಲ್ಲಿ ಕಾಗದವನ್ನು ಕೊಟ್ಟಳು. ರಾಯರು ಕಾಗದವನ್ನು ಓದಿದರು. ಬಾಲಕಿಯು ಕಾಗದವು ಯಾರಿಂದ ಬಂದಿದೆಯೆಂಬುದನ್ನರಿಯಲು ಆತುರಳಾಗಿ ತಂದೆಯ ಮುಖವನ್ನು ದೃಷ್ಟಿಸುತ್ತಾ ಕದಲದೆ ನಿಂತಿದ್ದಳು.

ರಾಯರು "ಪಾಪೂ, ನಾಳೆಯ ಬೆಳಿಗ್ಗೆ ಮೈಸೂರಿಂದ ಅತ್ತೆ ಬರುತ್ತಾಳಂತೆ. ನಾಳೆ ರಾತ್ರಿಯೇ ತಿರುಪತಿಗೆ ಹೊರಡುತ್ತಾಳಂತೆ. ಅಮ್ಮನಿಗೂ, ಅಜ್ಜಿಗೂ ಹೋಗಿ ಹೇಳು" ಎಂದರು.

"ಭಾವ ?"

"ಭಾವ, ಚಂದೂ ಎಲ್ಲರೂ ಬರುತ್ತಾರೆ. ಹೋಗಿ ಹೇಳು" ಅಂದರು ರಾಯರು.

ಬಾಲಕಿಯ ಮುಖವು ಅರಳಿತು. ಅಲ್ಲಿಂದ ಒಂದೇ ಓಟ ತೆಗೆದಳು.

ಅಜ್ಜಿಯು ಅಂಗಳದಲ್ಲಿ ಮೊಸರು ಕಡೆಯುತ್ತಿದ್ದಳು.

"ಅಜ್ಜೀ, ಅಜ್ಜೀ! ಅತ್ತೆ ಬರುತ್ತಾಳಂತೆ, ನಾಳೆ ಬೆಳಿಗ್ಗೆ. ಸಂಜೆಯೇ ತಿರುಪತಿಗೆ ಹೊರಡುತ್ತಾಳಂತೆ. ನನ್ನನ್ನೂ ತಿರುಪತಿಗೆ ಕಳುಹಿಸು ಅಜ್ಜೀ" ಎಂದು ಸರಸರನೆ ನುಡಿದಳು.

"ಆಗಲಿ, ಆಗಲಿ. ಅತ್ತೆಯನ್ನು ಕೇಳಿ ನೋಡೋಣ. ಅವಳು ಬರುವುದು ನಿನಗೆ ಹೇಗೆ ಗೊತ್ತು?"

"ಈಗ ಪೋಸ್ಟ್‌ಮ್ಯಾನ್ ಕಾಗದ ತಂದುಕೊಟ್ಟ. ಅಪ್ಪ ಓದಿ ಹೇಳಿದರು. ನಿನಗೆ ತಿಳಿಸಿ ಬಾ ಎಂದರು."

ಅಜ್ಜಿಗೆ ಮಗಳ ಆಗಮನವನ್ನು ಕೇಳಿ ಅತ್ಯಾನಂದವುಂಟಾಯಿತು. ಎಂದೂ ಇಲ್ಲದೆ ಇಂದು ಸುಪ್ರಭೆಯ ಕೈಯಲ್ಲಿ ನಿಂಬೆಯ ಹಣ್ಣಿನ ಗಾತ್ರ ಬೆಣ್ಣೆಯನ್ನು ತೆಗೆದಿಟ್ಟಳು. ಸುಪ್ರಭೆಗೆ ಆ ಪರಿಮಾಣದ ಬೆಣ್ಣೆಯನ್ನು

ಹೊಂದಿದ ಆನಂದವೂ ಸೋದರತ್ತೆಯು ಬರುವ ಆನಂದವೂ ಒಟ್ಟುಗೂಡಿ ತಲೆಕಾಲುಗಳೇ ತೋರದಂತಾಯಿತು. ಅಲ್ಲಿಂದ ಅಮ್ಮನ ಕೊಠಡಿಗೆ ಓಡಿದಳು. ಆಗ ಅಮ್ಮನು ಪುಟ್ಟಪಾಪನನ್ನು ಮಲಗಿಸುತ್ತಲಿದ್ದಳಾದುದ ರಿಂದ ಸದ್ದುಮಾಡಬೇಡವೆಂದು ಸುಪ್ರಭೆಯನ್ನು ಗದರಿಸಿ ಕೊಠಡಿಯಿಂದ ಹೊರಗೆ ಹೊರಡಿಸಿದಳು.

ಅಂದೆಲ್ಲಾ ಸುಪ್ರಭೆಗೆ ಆನಂದವೇ ಆನಂದ. ತನ್ನ ಸಂಗಾತಿಯ ರೊಬ್ಬರನ್ನೂ ಬಿಡದೆ ಪ್ರತಿಯೊಬ್ಬರ ಸಂಗಡವಲ್ಲೂ ನಮ್ಮತ್ತೆ ನಾಳೆ ಬರುತ್ತಾಳೆ, ಅವಳೊಡನೆ ನಾನೂ ತಿರುಪತಿಗೆ ಹೋಗುತ್ತೇನೆ, ಎಂದು ಜಂಭ ಕೊಚ್ಚಿಕೊಂಡಳು. ಅಜ್ಜಿಯು ಅಭ್ಯಂಜನ ಸ್ನಾನ ಮಾಡಿಸಲು ಕರೆದ ಕೂಡಲೆ ಸ್ವಲ್ಪವೂ ತಂಟೆ ಮಾಡದೆ ತಕ್ಷಣ ಹೋಗಿ ಎರೆದು ಕೊಂಡು ಬಂದಳು. ಜಾಣೆಯಾಗಿ ಕ್ಷಣಮಾತ್ರದಲ್ಲಿ ಊಟಮಾಡಿ ಎದ್ದಳು. ಅಂದಿನ ಪಗಲು ಶೀಘ್ರವಾಗಿ ಕಳೆದು ಸಂಜೆಯಾಗಿ ಮರುದಿನ ಬರಬಾರದೇ ಎಂದು ಕ್ಷಣಕ್ಷಣಕ್ಕೂ ಘಂಟೆಯನ್ನು ಎಣಿಸುತ್ತಲಿದ್ದಳು.

೨

ಮರುದಿವಸವೂ ಬಂದಿತು. ಮುಂಜಾನೆಯೇ ಎದ್ದು ಶೀಘ್ರವಾಗಿ ಮುಖ ತೊಳೆದುಕೊಂಡು ಬೋನಿನೊಳಗೆ ಅಡ್ಡಾಡುವ ಹುಲಿಯೋಪಾದಿ ಯಲ್ಲಿ ಬೀದಿಯ ಬಾಗಿಲಿಗೂ ಒಳಗೂ ನೂರಾರು ಸಾರಿ ಸುಪ್ರಭೆ ತಿರುಗಾಡಿದುದಾಯಿತು. ರಸ್ತೆಯಲ್ಲೊಂದು ಜಟಕಾಗಾಡಿಯು ಹೋದ ಶಬ್ದ ಕೇಳಿಬಂದರೂ ಸಹ ತನ್ನ ಸೋದರತ್ತೆಯೇ ಬಂದಳೆಂದು ಭಾವಿಸಿ ಬೀದಿಗೆ ಓಡುವಳು. ಆದರೆ ಆ ಹಾಳು ಜಟಕಾಗಾಡಿಯು ಆ ಎಳೆ ಹೃದಯ ವನ್ನು ಮೋಸಗೊಳಿಸಿ ನಿರ್ದಾಕ್ಷಿಣ್ಯವಾಗಿ ಮುಂದಕ್ಕೆ ಸಾಗಿ ಹೋಗಿ ಬಿಡುವುದು. ಆ ಹೊಳಪು ಕಣ್ಣುಗಳು ಸಜಲವಾಗುವುವು. ಆ ದುಂಡು ಕೆನ್ನೆಗಳು ಕೆಂಪೇರುವುವು. ತೊಂಡೆಯ ಹಣ್ಣಿನಂತಹ ಆ ಕೆಂದುಟಿಗಳಲ್ಲಿದ್ದ ಮೆಲುನಗೆಯು ಮಾಯವಾಗಿ, ಪೂರ್ಣ ಚಂದ್ರನನ್ನು ಕಾರ್ಮೋಡವು ಕವಿದಂತೆ, ಆ ದುಂಡು ಮುಖವು ನಿರಾಶೆಯಿಂದ ಪ್ರತಿಭಾಹೀನವಾಗಲು, ಸುಪ್ರಭೆಯು ಗಂಟುಮೋರೆ ಹಾಕಿಕೊಂಡು ಮನೆಯೊಳಗೆ ಸರಿಯುವಳು.

ಆದರೆ ಮರುಕ್ಷಣವೇ ಆ ಶೈಶವಹೃದಯದಲ್ಲಿ ಆತುರವೂ, ನಿರೀಕ್ಷಣೆಯೂ ಪರಿಪೂರ್ಣ ಪ್ರವಾಹದಂತೆ ತಲೆದೋರಿ, ಉಕ್ಕಿ ಸುರಿದು ಅವಳ ಕಾಲುಗಳು ಅವಳನ್ನು ಬೀದಿಯ ಬಾಗಿಲ ಕಡೆಗೆ ಸೆಳೆದೊಯ್ಯುವುವು.

ಕೊನೆಗೆ ಸೋದರತ್ತೆಯೂ ಬಂದೇ ಬಂದಳು. ಸುಪ್ರಭೆಯು ಅಮಿತಾನಂದದಿಂದ "ಅಜ್ಜೀ ಅತ್ತೆ ಬಂದಳು. ಅಕೋ! ಅಪ್ಪಾ ಅತ್ತೆ ಬಂದಳು" ಎಂದು ಕಿರುಚುತ್ತಾ ಮಿಂಚಿನೋಪಾದಿಯಲ್ಲಿ ಗಾಡಿಯನ್ನು ಸಮೀಪಿಸಿದಳು. ಸುಪ್ರಭೆಯನ್ನು ಕಂಡೊಡನೆಯೇ ಚಂದುವು ಗಾಡಿಯಿಂದ 'ಚಿಂಗನೆ' ಧುಮುಕಿ ಅವಳ ಕರವನ್ನು ಹಿಡಿದುಕೊಂಡು "ಬಾ, ಸುಪ್ರಭಾ! ಪುಟ್ಟ ಪಾಪನ್ನ ತೋರಿಸೆ" ಎಂದು ಒಳಗೆ ಎಳೆದೊಯ್ದನು.

ಸೋದರತ್ತೆಯು ತನ್ನ ತಾಯಿಯ ಮತ್ತು ಅಣ್ಣನ ಯೋಗಕ್ಷೇಮವನ್ನು ವಿಚಾರಿಸಿಕೊಂಡು ಜವಾನನು ಗಾಡಿಯಿಂದ ನಡುಮನೆಯಲ್ಲಿ ತಂದಿರಿಸಿದ ಪೆಟ್ಟಿಗೆಯಿಂದ ಒಂದು ಕಾಗದದ ಪೊಟ್ಟಣವನ್ನು ತೆಗೆದುಕೊಂಡು, ಪುಟ್ಟ ಪಾಪನು ಮಲಗಿರುವ ಚಿಕ್ಕಮನೆಯೊಳಗೆ ಪ್ರವೇಶಿಸಿದಳು. ತೊಟ್ಟಿಲಿನಿಂದ ಮಗುವನ್ನೆತ್ತಿಕೊಂಡು ಮುದ್ದಾಡಿದಳು. ಚಂದುವು ಮಗುವನ್ನು ನೋಡಿ "ಅಮ್ಮಾ, ಎಷ್ಟೊಂದು ಪುಟಾಣಿ ಪಾಪ ನೋಡೆ! ಅವರ ಕಾಲು ನೋಡೆ! ಅದೆಷ್ಟೊಂದು ಪುಟಾಣಿಯಾಗಿದೆ! ಅಕೋ ನೋಡೆ, ನಮ್ಮನ್ನು ನೋಡಿ ನಗುತ್ತೆ!" ಎಂದು ಪಾಪನ ಕಾಲನ್ನೂ, ಕೈಯನ್ನೂ ಮುಟ್ಟಿ ಮುಟ್ಟಿ ನೋಡಿ ಆನಂದಿಸಿದನು.

ಅವನ ತಾಯಿ ಸುಂದರಿಯು 'ಮುಟ್ಟಬಾರದು ಚಿನ್ನಾ, ಪಾಪನಿಗೆ ನೋಯುತ್ತೇ' ಎನ್ನುತ್ತಾ ತಾನು ತಂದ ಪೊಟ್ಟಣವನ್ನು ಬಿಚ್ಚಿ ಮಕಮಲಿನ ಬಟ್ಟೆಯಲ್ಲಿ ಚಿಮುಕಿ ಕೆಲಸ ಮಾಡಿದ್ದ ಅಂದವಾದೊಂದು ಹೊಸ ಅಂಗಿಯನ್ನು ತೆಗೆದು ಮಗುವಿಗೆ ತೊಡಿಸಿದಳು.

ಸುಪ್ರಭೆಯು 'ಅಮ್ಮಾ ನೋಡೆ! ಅಂಗಿ ಎಷ್ಟೊಂದು ಚೆನ್ನಾಗಿದೆ! ಪಾಪನಿಗೀಗ ತಾನು ಹೊಸ ಅಂಗಿಯನ್ನು ಹಾಕಿಕೊಂಡಿರುವೆನೆಂದು ಗೊತ್ತೇನೇ ಅಮ್ಮಾ?' ಎಂದಳು.

ಅಮ್ಮನಾದ ಲಕ್ಷ್ಮಿಯು 'ಅದಕ್ಕೊಂದೂ ಈಗ ತಿಳಿಯದು' ಎನ್ನಲು,

ಚಂದುವು 'ಮತ್ತೆ ಹಸಿವು, ನಿದ್ದೆ ಏನೂ ಗೊತ್ತಾಗೋಲ್ವೇನು ಅದಕ್ಕೆ?' ಎಂದು ಪುಟ್ಟದೊಂದು ಪ್ರಶ್ನೆಯನ್ನು ಹಾಕಿದನು.

ಸುಂದರಿ.—'ಅವೆಲ್ಲಾ ಗೊತ್ತುಂಟು.'

ಚಂದು.—'ಮತ್ತೆ ಅದಕ್ಕೆ ಮಾತನಾಡಲು ಬರೋಲ್ಲವಲ್ಲಾ. "ನನಗೆ ಹಸಿವಾಗಿದೆ" ಯೆಂದು ಹೇಗೆ ಹೇಳುತ್ತೆ?'

ಸುಂದರಿ.—'ಎಲ್ಲಾದಕ್ಕೂ ಅಳೋದೊಂದೇ ಗೊತ್ತಿದೆ ಅದಕ್ಕೆ.'

ಸುಪ್ರಭೆಯ ಮನಸ್ಸಿನಲ್ಲಾಗಲೇ ಆ ಹೊಸ ಅಂಗಿಯನ್ನು ಕಂಡು ಅಸೂಯೆ ಉಂಟಾಯಿತು. "ಎಷ್ಟೊಂದು ಅಂದವಾದ ಅಂಗಿ! ಆದರೆ ಈ ಗೊಡ್ಡು ಪಾಪನಿಗೆ ಏನೊಂದೂ ತಿಳಿಯದು ಹೊಸ ಅಂಗಿ ಹಾಕಿಕೊಂಡಿರುವೆನೆಂದು ತಿಳಿಯದ ಪಾಪನಿಗೇಕೆ ಇಷ್ಟೊಂದು ಚಂದವಾದ ಅಂಗಿ? ನನಗಂತೂ ಇಂತಹದೊಂದು ಅಂಗಿಯನ್ನು ಹೊಲಿಸಿಕೊಟ್ಟಿದ್ದರೆ ಎಷ್ಟೊಂದು ಸಂತೋಷಪಡುತ್ತಿದ್ದೆನೋ. ಈ ದೊಡ್ಡವರೇ ಹೀಗೆ" ಎಂದು ಹಲವು ಬಗೆಯ ಯೋಚನಾತರಂಗಗಳು ಅವಳ ಎಳೆಯ ಪುಟಾಣಿ ಹೃದಯದಲ್ಲಿ ಉದ್ಭವಿಸಿದವು.

ಲಕ್ಷ್ಮಿಯು 'ರಾತ್ರಿಯೇ ತಿರುಪತಿಗೆ ಹೊರಡಬೇಕೇನು ಸುಂದರಾ?' ಎಂದಳು.

ಸುಂದರಿ.— "ಹೂಂ" ಎಂದಳು.

ಸುಪ್ರಭೆ.—"ಅತ್ತೆ— ಅತ್ತೆ— ತಿರುಪತಿಗೆ ನಾನೂ ಬರಲೆ?" ಎಂದು ಕೊರಳನ್ನು ಕೊಂಕಿಸಿಕೊಂಡು ಅಂಗಲಾಚಿ ಕೇಳಿದಳು.

ಲಕ್ಷ್ಮಿ "ನಾನು, ಅಪ್ಪ, ಅಜ್ಜೀ ಯಾರೂ ಹೋಗೋಲ್ಲ. ನೀನು ಮಾತ್ರ ಅತ್ತೆಯೊಡನೆ ಹೋಗುವಿಯಾ?"

ಸುಪ್ರಭೆ "ಮತ್ತೆ . . . . ಮತ್ತೆ . . . . ನೀವೂ ಬನ್ನಿ."

"ಇಲ್ಲಮ್ಮಾ ಪುಟ್ಟ ಪಾಪನಿಗೆ ಶೀತವಾಗುತ್ತೆ, ಈಗ ಹೋದರೆ. ಆಮೇಲೆ ನಾವೆಲ್ಲರೂ ಹೋಗೋಣ."

"ನಿನಗೆ ತಿರುಪತಿಯಿಂದ ಗೊಂಬೆ ತಂದುಕೊಡುತ್ತೇನೆ, ಚಿನ್ನಾ. ನೀನು ಜಾಣೆಯಲ್ಲವೇ?"

"ಮತ್ತೆ . . . . ಮತ್ತೆ . . . . ಈ ಪಾಪನಹಾಗೇ ಅದಕ್ಕೆ ಕೈಕಾಲು ಎಲ್ಲ ಇರಬೇಕು.

"ಕೈ ಕಾಲು, ಮುಖ ಎಲ್ಲ ಇರುತ್ತೆ. ಇಲ್ಲಿ ಗಲಾಟೆ ಮಾಡಬೇಡಿ. ಪಾಪನು ದಿಗಿಲುಬೀಳುತ್ತಾನೆ. ನಡುಮನೆಗೆ ಹೋಗಿ ಆಟವಾಡಿ" ಎಂದು ಸುಂದರಿಯು ಸುಪ್ರಭೆಯನ್ನು ಮುದ್ದಿಟ್ಟುಕೊಂಡು, ಮಕ್ಕಳಿಬ್ಬರನ್ನೂ ನಡುಮನೆಗೆ ಕಳುಹಿಸಿ, ಎಳೆಯ ಮಗುವನ್ನು ಅದರ ಮಾತೆಯ ಮಡಿಲಲ್ಲಿ ಮಲಗಿಸಿ, ತಾನು ಮುಖ ತೊಳೆದುಕೊಳ್ಳಲು ಹೋದಳು.

೩

ಅಂದು ರಾತ್ರಿಯ ಗಾಡಿಯಲ್ಲಿಯೇ ದೇವದೇವನಿಗೆ ಹರಕೆಯನ್ನು ಸಲ್ಲಿಸಿಬರಲು ಸುಪ್ರಭೆಯ ಸೋದರತ್ತೆಯೂ, ಭಾವನವರೂ ಚಂದೂ ಸಮೇತರಾಗಿ ತಿರುಪತಿಗೆ ಹೊರಟುಹೋದರು.

"ಅತ್ತೆಯು ಗೊಂಬೆ ತರುತ್ತಾಳೆ. ಮೇಜಿಸ್ಟ್ರೇಟರ ಮನೆಯ ಶಾಂತನ ಗೊಂಬೆಯಂತೆ ಒಳ್ಳೆಯ ಚಂದವಾದ ಕರ್ಪೂರದ ಗೊಂಬೆ (ಸೆಲುಲಾಯ್ಡ್). ಅದರ ಕೈಕಾಲುಗಳೆಲ್ಲವೂ ನಮ್ಮ ಪುಟ್ಟ ಪಾಪನ ದಂತೆಯೇ ದುಂಡುದುಂಡಾಗಿ ಬೆಳ್ಳಗೆ ಇರುವುದು. ಅಮ್ಮನಿಗೆ ಹೇಳಿ ನಮ್ಮ ತಮ್ಮಯ್ಯನಿಗೆ ಅತ್ತೆಯು ತಂದುಕೊಟ್ಟಂಥಹುದೇ ಪುಟಾಣಿ ಅಂಗಿಯೊಂದನ್ನು ಅದಕ್ಕೆ ಹೊಲಿಸಿಹಾಕಬೇಕು. ಅಂದು ಪಾಪಚ್ಚಿಗೆ ತೊಟ್ಟಿಲು ಹಾಕಿದರಲ್ಲಾ, ಅದರಹಾಗೆ ಲಲಿತೆ, ಕಮಲೆ, ಸ್ವರ್ಣಲತೆ, ಸ್ನೇಹಪ್ರಭೆ, ಲೀಲೂ, ಎಲ್ಲರನ್ನೂ ಕರೆದು ತೊಟ್ಟಿಲುಹಾಕಿ ಆಟವಾಡಬೇಕು" ಎಂದೆಲ್ಲಾ ಆ ಪುಟ್ಟ ಬಾಲಕಿಯ ಮಿದುಳಿನಲ್ಲಿ ಮೂಡಿ ಮೂಡಿ ಮಾಯವಾದವು. ಅತ್ತೆಯು ಹಿಂದಿರುಗಿ ಬರುವ ದಿವಸವೆಂದೆಂದು ಪ್ರತಿನಿತ್ಯವೂ ಪ್ರಾತಃಕಾಲದಲ್ಲಿ ಹಾಸಿಗೆಯಿಂದೆದ್ದೊಡನೆಯೇ ಅಜ್ಜಿಯ ಹತ್ತಿರದಲ್ಲಿ ಹೋಗಿ ಕುಳಿತು ಕಾಫಿ ಕುಡಿಯುತ್ತಾ ಬೆರಳುಗಳನ್ನು ಮಡಿಸಿ ಲೆಕ್ಕಹಾಕುವಳು. ದಿನ ಕಳೆದಹಾಗೆಲ್ಲಾ ಅವಳ ಹುರುಪೂ, ಉತ್ಸಾಹವೂ, ಆನಂದವೂ ಮಳೆಗಾಲದಲ್ಲಿ ಕೆರೆಯ ನೀರಿನ ಮಟ್ಟವು ಏರುವಂತೆ ಏರುತ್ತಲಿತ್ತು. ತನ್ನ ಸಂಗಾತಿಯರ ಹತ್ತಿರದಲ್ಲೆಲ್ಲಾ ತನ್ನ ಅತ್ತೆಯು ತನಗೆ ತರುವ ಗೊಂಬೆಯನ್ನು ವರ್ಣಿಸಿ, ವರ್ಣಿಸಿ ಹೆಮ್ಮೆಪಡುವಳು.

೪

ತಿರುಪತಿಯಿಂದ ಅತ್ತೆಯೂ ಹಿಂದಿರುಗಿ ಬಂದರು. ಗೊಂಬೆಯನ್ನೂ ತಂದುಕೊಟ್ಟಳು. ಆದರೆ..... ಆದರೆ ಸುಪ್ರಭೆಯ ಕಲ್ಪನಾಲೋಕದಲ್ಲಿ ಹುಟ್ಟಿದ ಗೊಂಬೆಗೂ ಅವಳ ಅತ್ತೆಯು ತಂದುಕೊಟ್ಟ ಗೊಂಬೆಗೂ ಪರ್ವತಕ್ಕೂ ಮಡುವಿಗೂ ಇರುವ ಅಂತರವಿದ್ದಿತು. ಅದು ಒಂದು ಕರೇಪುರದ ತಿರುಪತಿಯ ಮರದ ಗೊಂಬೆ! ಗೇಣುದ್ದದ ಗೊಂಬೆ! ಶಾಂತನ ಗೊಂಬೆಯಾದರೋ ಸುಪ್ರಭೆಯ ತಮ್ಮಯ್ಯನ ಮುಕ್ಕಾಲುಭಾಗ ಪರಿಮಾಣದ್ದು. ಅತ್ತೆಯು ತಂದ ಗೊಂಬೆಗೆ ಕೈಕಾಲುಗಳೇನೂ ಅಲ್ಲಾಡಿಸುವಂತಿರಲಿಲ್ಲ. ಅವಳ ಮನೋರಾಜ್ಯದ ಗಾಳಿಗೋಪುರಗಳೆಲ್ಲವೂ ಮುರಿದು ನುಚ್ಚುನೂರಾಯಿತು. ಗೊಂಬೆಯನ್ನು ಸುಪ್ರಭೆಯು ಅರೆಕ್ಷಣ ದುರುಗುಟ್ಟಿ ನೋಡಿದಳು. ಬಳಿಕ ಅತ್ತೆಯನ್ನೂ ಗೊಂಬೆಯನ್ನೂ ಒಂದು ಸಾರಿ ನೋಡಿದಳು. ಗೊಂಬೆಯನ್ನು ಕೆಳಗೆ ಬಿಸಾಟು ಅಮ್ಮನ ಸೆರಗನ್ನು ಮುಖಕ್ಕೆ ಮುಚ್ಚಿಕೊಂಡು ಬಿಕ್ಕಳಿಸತೊಡಗಿದಳು. ಆ ಎಳೆಯ ಬಾಲಕಿಯ ಈ ವರ್ತನೆಯನ್ನೂ, ದುಃಖಾವೇಶವನ್ನೂ ಕಂಡು ಏನೂ ತಿಳಿಯದೆ ಎಲ್ಲರೂ ಕಣ್ಣು ಕಣ್ಣು ಬಿಟ್ಟರು.

---

# ಪ್ರಾಯಶ್ಚಿತ್ತ

ಸಿದ್ದಾ, ಲೋ ಸಿದ್ದಾ! ಗೋಲಿ ಆಡೋಣ ಬರುತ್ತೀಯಾ? ಎಂದು ಶ್ರೀಧರನು ಅಂಗಳದಲ್ಲಿ ನಿಂತು, ಸೀಬೆಯ ಮರದಡಿಯಲ್ಲಿ ಸೀಬೆಯ ಕಾಯಿಯೊಂದನ್ನು ಕಚ್ಚುತ್ತಾ ನಿಂತಿರುವ ಮತ್ತೊಬ್ಬ ಬಡ ಹುಡುಗನನ್ನು ಕರೆದನು.

"ನಾನು ಬರೋಲ್ಲಾಪ್ಪಾ, ಬಂದರೆ ಅಮ್ಮಾವ್ರು ಕೋಪ್ಸಿಕೋತಾರೆ."

"ಇಲ್ಲವೋ. ಈ ಗಿಡದ ಮರೆಯಲ್ಲೇ ಆಡೋಣ. ಅಮ್ಮನು ಅಡಿಗೆ ಮಾಡುತ್ತಿದ್ದಾಳೆ. ನೋಡೋಲ್ಲ."

"ನಂಗೆ ಭಯವಾಗ್ತೇಪಾ"

"ಹಾಗಾದರೆ ಹೋಗಪ್ಪಾ, ಇನ್ನುಮೇಲೆ ನಾನು ನಿನಗೆ ತಿಂಡೀಗಿಂಡೀ ತಂದುಕೊಡೋಲ್ಲಾ. . . ."

"ಇಲ್ಲಾ ಬುದ್ಧೀ. ಆಟಕ್ಕೆ ಬರ್ತೇನೆ. ಅಮ್ಮಾವರು ಕೋಪ್ಸಿಕೋತಾರೇಂತ ಅಂದೆ, ಅಷ್ಟೆ. ಈಗ ಏನಾಡೋಣ ಬುದ್ಧಿ?" ಎಂದು ತಡೆದು ತಡೆದು ನಿದಾನವಾಗಿ ಹಿಂದು ಮುಂದು ನೋಡುತ್ತಾ ಬಂದನು.

ತಕ್ಷಣ ಶ್ರೀಧರನ ಮುಖ ಅರಳಿತು. ತನ್ನ ಜೇಬಿನಲ್ಲಿ ಸಿದ್ದನಿಗಾಗಿ ಮುಂಚಿತವಾಗಿಯೇ ತಂದಿದ್ದ ಎರಡು ಬಿಸ್ಕತ್ತುಗಳನ್ನು ತೆಗೆದು ಅವನ ಕೈಗೆ ಕೊಟ್ಟನು. ಮಕ್ಕಳಿಬ್ಬರೂ ಆನಂದೋತ್ಸಾಹದೊಡನೆ ಆಟವಾಡಲು ತೊಡಗಿದರು. ಒಂದೆರಡು ನಿಮಿಷಗಳೊಳಗಾಗಿಯೇ ಪಾರ್ವತಿಯು 'ಲೋ ಶ್ರೀಧರಾ! ಶ್ರೀಧರಾ! ಎಲ್ಲಿಗೆ ಹೋದೆಯೋ? ಆ ಕೆಂಪೀ ಹುಡುಗನೊಡನೆ ಆಡಲು ಹೋಗಿಬಿಟ್ಟೆಯೇನು?' ಎಂದು ಘರ್ಜಿಸುತ್ತ ಪುತ್ರನನ್ನು ಹುಡುಕಿಕೊಂಡು ಬಂದಳು.

"ಇಕೋ, ಅಮ್ಮಾ ಬಂದೆ" ಎಂದು ಗಿಡದ ಮರೆಯಿಂದ ಒಂದೇ

ಮನೆ ಓಡಿಬಂದ ಶ್ರೀಧರ. ಅದೇ ಗಿಡದ ಮರೆಯಲ್ಲಿ ಮತ್ತೊಂದು ವ್ಯಕ್ತಿ ಕಾಣಿಸಿಕೊಳ್ಳಲಾಗಿ ಪಾರ್ವತಿಯು ಮಿತಿಮೀರಿದ ಕೋಪದಿಂದ "ಛೀ, ತುಂಟ ಹುಡುಗಾ. ಇನ್ನುಮೇಲೆ ಅವನೊಡನೆ ಆಟವಾಡೀಯೆ ಜೋಕೆ!" ಎಂದು ಮಗನನ್ನು ಖಂಡಿಸಿದಳು.

"ಯಾಕಮ್ಮಾ, ಅವನೊಡನೆ ಆಟವಾಡಿದರೇನಮ್ಮಾ?"

"ಏನೇ? ಅವರನ್ನು ನಾವು ಮುಟ್ಟಬಾರದು."

"ಯಾಕಮ್ಮಾ?"

"ಅವರು ಕೀಳು ಜಾತಿಯವರು ಅದಕ್ಕಾಗಿ."

"ಕೀಳುಜಾತಿ ಅಂದ್ರೆ?"

"ಅದೆಲ್ಲವೂ ನಿನಗೆ ಗೊತ್ತಿಲ್ಲ. ನಾನು ಹೇಳಿದಂತೆ ಕೇಳು" ಎಂದು ಗದರಿಸಿದಳು.

"ಸರಿಯಮ್ಮಾ" ಎಂದು ಅರ್ಧಮನಸ್ಸಿನಿಂದ ಶ್ರೀಧರ ಹೇಳಿ ತಲೆ ತಗ್ಗಿಸಿದನು.

ಆ ಅರಿಯದ ಹಸುಳೆಗೆ ಜಾತಿಮತಭೇದಗಳೆಲ್ಲವೂ ತಿಳಿಯುವ ಬಗೆ ಹೇಗೆ? ಅವನು ತಿಳಿದಿದ್ದು ಸ್ನೇಹ. ಪ್ರೇಮಕ್ಕೂ ಸ್ನೇಹಕ್ಕೂ ವಾತ್ಸಲ್ಯಕ್ಕೂ ಮಧ್ಯೆ ಜಾತಿಮತವೆಲ್ಲಿ ಬಂತು? "ಅಮ್ಮನು ಏಕೆ ಹೀಗೆ ಹೇಳುತ್ತಾಳೆ? ಸಿದ್ದನೂ ನನ್ನಂತೆಯೇ ಇರುವನಲ್ಲಾ. ಕೀಳುಜಾತಿಯೆಂದರೇನು? ಸಿದ್ದನಿಗೂ ನನ್ನಂತೆಯೇ ಕಣ್ಣು, ಮೂಗು, ಬಾಯಿ ಎಲ್ಲಾ ಇದೆಯಲ್ಲಾ. ಅವನ ಹತ್ತಿರದಲ್ಲಿ ನನಗಿಂತ ಬೇರೆ ಯಾವ ವ್ಯತ್ಯಾಸವೂ ಕಾಣಲಿಲ್ಲವಲ್ಲಾ. ಆದರೆ ಅವನು ಕಪ್ಪು ಎಂದು ಅಮ್ಮನು ಹೀಗೆ ಹೇಳುತ್ತಾಳೆಯೇ, ನಾನು ಅವನನ್ನು ಮುಟ್ಟಿದರೆ ಆ ಕಪ್ಪು ಬಣ್ಣ ನನಗೆ ಅಂಟಿಕೊಂಡುಬಿಡುವುದೆಂದು? ಅದೇಕೆ ನಮ್ಮ ಕಿಟ್ಟೂವಾವ ಕೂಡ ಕಪ್ಪಗೇ ಇದ್ದಾನೆ. ಅವನು ನಮ್ಮ ಮನೆಗೆ ಬಂದಾಗಲೆಲ್ಲಾ ನನ್ನನ್ನು ಎಷ್ಟೊಂದು ಸಲ ಎತ್ತಿಕೊಂಡು ಮುದ್ದಾಡುತ್ತಾನಲ್ಲಾ. ಅವನ ಕಪ್ಪು ನನಗೆ ಅಂಟಲೇ ಇಲ್ಲವಲ್ಲಾ" ಎಂದು ಆ ಎಳೆಯ ಮಗುವಿನ ಮನಸ್ಸು ಜಾತಿಮತಭೇದವನ್ನು ಕುರಿತು ಬಹುವಾಗಿ ಸಂಶೋಧನೆಮಾಡಿ ನೋಡಿತು. ಆದರೆ ಆ ನಿರ್ಮಲವಾದ ಆತ್ಮಕ್ಕೆ ಯಾವದೊಂದು

ವ್ಯತ್ಯಾಸವೂ ತೋರಲಿಲ್ಲ. ಮಕ್ಕಳು ದೇವಾಂಶವೆಂದು ಹೇಳುವುದಿಲ್ಲವೇ? ಭಗವಂತನಿಗೆ ತನ್ನ ಭಕ್ತಾದಿಗಳಲ್ಲಿ ಜಾತಿ ಮತ ವ್ಯತ್ಯಾಸವಾವುದೂ ಇಲ್ಲವೆಂದು ಹೇಳುವುದಿಲ್ಲವೇ, ಅವರಂತೆಯೇ ಆ ಎಳೆಯ ಬಾಲಕನಿಗೂ ಈ ವ್ಯತ್ಯಾಸವೆಲ್ಲವೂ ವಿಚಿತ್ರವಾಗಿ ತೋರಿಬಂದಿತು.

ರಾತ್ರಿಯೆಲ್ಲವೂ ಶ್ರೀಧರನಿಗೆ ಸಿದ್ದನ ವಿಷಯವಾಗಿಯೇ ನೆನಪು. ಸ್ವಪ್ನದಲ್ಲಿಯೂ ಸಹ ತಾನು ಸಿದ್ದನೊಡನೆ ಆನಂದವಾಗಿ ಆಟವಾಡು ತ್ತಲಿದ್ದನು. ಮರುದಿನ ಬೆಳಗಾದದ್ದೇ ತಡ. ತಾನು ತಾಯಿಯ ಹತ್ತಿರದಲ್ಲಿ ಕೊಟ್ಟ ಭರವಸೆಯನ್ನು ಮರೆತನು. ಮಾತೆಯು ಎಲ್ಲರಿಗೂ ಕಾಫೀ, ಫಲಾಹಾರಾದಿಗಳನ್ನು ಹಂಚಿದ ಬಳಿಕ ಸ್ನಾನಕ್ಕೆ ಹೋಗಿರುವ ಸಮಯ ನೋಡಿ, ಮೆಲ್ಲಗೆ ಹಾಲುಬೀರುವನ್ನು ತೆರೆದು ಸ್ವಲ್ಪ ಭಕ್ಷ್ಯ ವನ್ನು ತೆಗೆದು ಜೇಬಿನಲ್ಲಿ ಹಾಕಿಕೊಂಡು ಅಂಗಳದ ಕಡೆಗೆ ಹೊರಟನು.

ಎಂದಿನಂತೆ ಮುಸುರೆಯವಳಾದ ಕೆಂಪಿಯು ಒಂದು ನಲ್ಲಿಯ ಕೆಳಗೆ ಮುಸುರೆಯುಜ್ಜುತ್ತಾ ಕುಳಿತಿದ್ದಳು. ಅವಳ ಮೊಮ್ಮಗನಾದ ಸಿದ್ದನು ನಲ್ಲಿಯನ್ನು ತೆರೆದುಬಿಟ್ಟು, ನಲ್ಲಿಯ ಬಾಯಿಯನ್ನು ತನ್ನ ಪುಟ್ಟ ಕೈಯಿಂದ ಅದುಮಿ ಹಿಡಿದುಕೊಂಡು ಚಿಕ್ಕ ಮಕ್ಕಳಿಗೆ ಅನುಗುಣವಾದ ಆಟದಲ್ಲಿ ಲೀನನಾಗಿದ್ದನು. ನೀರು ಅವನ ಕೈಯಿಂದ ತಪ್ಪಿಸಿಕೊಂಡು ನಾಲ್ಕು ದಿಕ್ಕುಗಳಲ್ಲಿಯೂ ಚಿಲುಮೆಯಂತೆ (Fountain) ಹಾರಿ ಬೀಳುತ್ತಲಿದ್ದಿತು. ಆ ನೀರಿನ ಹನಿಗಳ ಮೇಲೆ ಬಾಲ ಸೂರ್ಯನ ಕಿರಣಗಳು ಬಿದ್ದು ವಿವಿಧ ವರ್ಣಜಾಲಗಳನ್ನುಂಟುಮಾಡಿ, ನವರತ್ನಗಳು ಉದುರುವಂತೆ ತೋರುತ್ತಲಿದ್ದಿತು. ಈ ಮನೋಹರವಾದ ದೃಶ್ಯವನ್ನು ನೋಡುತ್ತಾ ಶ್ರೀಧರನೂ ಸಹ ಸ್ವಲ್ಪ ಕಾಲ ನಿಂತಿದ್ದನು. ಕೆಂಪಿಯು ''ಸಾಕುಮಾಡೋ ನಿನ್ನ ಆಟಾನ್ನ, ತುಂಟ, ಪೋಲೀ, ಅಮ್ಮಾವರು ನೋಡಿದ್ರೆ ಕೋಪಿಸ್ಕೋತಾರೆ. ಕೊಳಾಯಿಯನ್ನು ಮುಚ್ಚಿಟ್ಟು ಹೋಗ್ತೀಯೋ ಇಲ್ವೋ, ನನ್ನ ಮೈಮೇಲೆಲ್ಲಾ ಏಟೊಂದು ನೀರು ಬಿದ್ದೆ....'' ಎಂದು ರೇಗಿಬಿದ್ದಳು.

ಶ್ರೀಧರನು 'ಬಾರೋ ಸಿದ್ದಾ ಗೋಲೀ ಆಡೋಣ ಇಕೋ ನೋಡು' ಎಂದು ತನ್ನ ಜೇಬನ್ನು ತಟ್ಟಿ ತೋರಿಸಲಾಗಿ, ಸಿದ್ದನ ನಾಲಿಗೆಯಲ್ಲಿ

ನೀರೂರಿತು. ತಕ್ಷಣ ನಲ್ಲಿಯನ್ನು ಮುಚ್ಚಿಬಿಟ್ಟು ಆಟವಾಡಲು ಓಡಿಬಿಟ್ಟನು. ಅರ್ಧ ಹೊಟ್ಟೆ ಕೂಳಿಗೆ ಸಹ ಗತಿಯಿಲ್ಲದ ಆ ಬಡ ಹುಡುಗನು ಶ್ರೀಧರನ ಕೃಪಾಕಟಾಕ್ಷದಿಂದ ತುಪ್ಪದಲ್ಲಿ ಕರಿದ ವಿವಿಧ ಭಕ್ಷ್ಯಗಳ ಸವಿಯನ್ನು ಸವಿದು ಆನಂದಿಸುತ್ತಿದ್ದನು. ಒಂದು ತಿಂಗಳಿಂದೀಚೆಗೆ ಕೆಂಪಿಯು ಶ್ರೀಧರನ ಮನೆಯಲ್ಲಿ ಮುಸುರೆಯ ಕೆಲಸಕ್ಕೆ ಸೇರಿದಳು. ಆವಳಿಗೆ ಬಂಧುಬಳಗದವರಾರೂ ಇರಲಿಲ್ಲ. ಒಬ್ಬಳೇ ಒಬ್ಬಳು ಮಗಳಿದ್ದಳು. ಅವಳಿಗೆ ವಿವಾಹವಾಗಲು, ಸುಮಾರು ಆರು ವರ್ಷಗಳ ನಂತರ ಒಂದು ಗಂಡು ಮಗುವನ್ನು ಹೆತ್ತು ಪ್ರಸವಿಸಿದ ಐದನೇಯ ದಿನವೇ ಮರಣ ಹೊಂದಿದಳು. ಆ ಮಗುವೇ ಸಿದ್ದ. ಕೆಂಪಿಗೆ ಸಿದ್ದನೇ ಈ ವಿಶಾಲ ಪ್ರಪಂಚದಲ್ಲಿ ಸಕಲೈಶ್ವರ್ಯವೂ. ಆ ಮಗುವನ್ನು ಅವಳು ಅದೆಷ್ಟೊಂದು ಮಮತೆಯಿಂದಲೂ, ಪ್ರೀತ್ಯಾದರದೊಡನೆಯೂ ಸಾಕಿದಳೆಂಬುದನ್ನು ವಿವರಿಸಲಸಾಧ್ಯ. ಶ್ರೀಧರನೂ ಸಹ ಅವನ ತಂದೆ ತಾಯಿಗಳಿಗೆ ಒಬ್ಬನೇ ಮಗ. ತನ್ನೊಡನೆ ಆಟವಾಡಿ ಪೈಪೋಟಿಯಿಡಲೂ, ಈ ಕ್ಷಣ ಜಗಳವಾಡಿ ಮರುಕ್ಷಣವೇ ಸಮಾಧಾನ ಹೊಂದಲೂ, ಮುದ್ದಾಡುವುದಕ್ಕೂ ಅವನಿಗೊಂದು ಜೊತೆ ಬೇಕಿತ್ತು. ನೆರೆಹೊರೆಯ ಮನೆಗಳಲ್ಲೂ ಸಹ ಅವನ ಜೊತೆಯ ಮಕ್ಕಳಾರೂ ಇರಲಿಲ್ಲವಾಗಿ ಕೆಂಪಿಯು ಕೆಲಸಕ್ಕೆ ಬರುವಾಗಲೆಲ್ಲಾ ಮನೆಯನ್ನು ಬೀಗ ಹಾಕಿಕೊಂಡು ಮೊಮ್ಮಗನನ್ನೂ ಜೊತೆಯಲ್ಲಿ ಕರೆದುಕೊಂಡುಬರುವ ವಾಡಿಕೆ. ಸಿದ್ದನನ್ನು ಕಂಡೊಡನೆಯೇ 'ಹುಡುಕಲು ಹೋದ ದೈವವು ಇದಿರಿಗೇ ಬಂದಂತೆ' ಶ್ರೀಧರನು ಹಿಗ್ಗಿದನು. ಎರಡು ಮಕ್ಕಳೂ ಸಹ ಒಂದೇ ವಯಸ್ಕರು, ಒಂದೇ ಜೊತೆ. ಶ್ರೀಧರನ ತಾಯಿ ತಂದೆಯರಿಗೆ ಅವನು ಸಿದ್ದನೊಡನೆ ಆಟವಾಡುವುದು ಸ್ವಲ್ಪವೂ ಇಷ್ಟವಿಲ್ಲ. ತಮ್ಮ ಮನೆಯ ಕುಲದೀಪ, ಮುದ್ದು ಮಗ, ಮೂರು ಲಕ್ಷ ರೂಪಾಯಿಗೆ ಭವಿಷ್ಯದ ಯಜಮಾನ, ಕೀಳು ಜಾತಿಯ ಹುಡುಗ, ಅದರಲ್ಲೂ ತಿಂಗಳಿಗೊಂದು ರೂಪಾಯಿ ಸಂಬಳ ತೆಗೆಯುವ ಮುಸುರೆಯವಳ ಮೊಮ್ಮಗನೊಡನೆ ಆಟವಾಡುವುದೆಂದರೆ? ಶ್ರೀಧರನಿಗೆ ಎಷ್ಟೆಷ್ಟೋ ಬುದ್ಧಿವಾದಗಳನ್ನು ಹೇಳಿಯೂ ಗದರಿಸಿಯೂ ಬೈದೂ ಅವನೊಡನೆ ಆಟವಾಡುವುದನ್ನು ತಡೆಯಲು ಯತ್ನಿಸಿದರು.

ಯಾವುದೊಂದೂ ಸಫಲವಾಗಲಿಲ್ಲ. ಮಗುವಿನ ನಿಷ್ಕಳಂಕವಾದ ಪ್ರೇಮವೆಂಬ ನಂದಾದೀಪವನ್ನು ನಂದಿಸಲು ಯಾರಿಂದ ಸಾಧ್ಯ?

ಅಂದು ಗಣೇಶಚತುರ್ಥಿ. ಶಂಕರರಾಯರ ಮನೆಯಲ್ಲಿ ಒಂದೇ ಸಡಗರ. ಮನೆಯೆಲ್ಲವೂ ಸಾರಿಸಲ್ಪಟ್ಟು ಹಿಟ್ಟಿನ ರಂಗೋಲಿಯಿಂದ ಅಲಂಕರಿಸಲ್ಪಟ್ಟು, ಮಾವಿನಸೊಪ್ಪಿನ ತೋರಣಗಳಿಂದ ಬೆಳಗುತ್ತಲಿತ್ತು. ದೇವರ ಮನೆಯಲ್ಲಿ ಸುಂದರವಾದ ಮಂಟಪವೊಂದು ನಿರ್ಮಿಸಲ್ಪಟ್ಟು ಬಾಳೆ, ಸೀಬೆ, ದಾಳಿಂಬೆ, ದ್ರಾಕ್ಷೆ, ಕಿತ್ತಳೆ ಮುಂತಾದ ವಿವಿಧ ಹಣ್ಣು ಹಂಪಲ ಗೊಂಚಲಗಳೂ, ಶೇವಂತಿಗೆ, ಜಾಜಿ, ಪಾರಿಜಾತ, ಗುಲಾಬಿ ಮುಂತಾದ ಪರಿಮಳ ಪುಷ್ಪಗಳೂ, ಮಂಟಪವನ್ನಲಂಕರಿಸಿರಲಾಗಿ ವಿವಿಧ ಬಣ್ಣದ ನೆಕ್ಕೀ ಕಾಗದಗಳಿಂದ ಅಲಂಕೃತವಾದ ಮಂಟಪವು ಮತ್ತಷ್ಟು ಪರಿಶೋಭಿತವಾಗಿ ಕಾಣುತ್ತಿರಲು ಬಾಳೆಯ ಕಂದುಗಳೂ, ಮಾವಿನ ತೋರಣಗಳೂ ಸರ್ವಸುಂದರವಾದ ಮಂಟಪಕ್ಕೆ ಮತ್ತಷ್ಟು ಕಳೆಯನ್ನು ಕೊಟ್ಟವು. ಬಣ್ಣಬಣ್ಣದ ವಿದ್ಯುಚ್ಛಕ್ತಿ ದೀಪಗಳಿಂದಲೂ ಕಂಚಿನ ಮತ್ತು ಬೆಳ್ಳಿಯ ದೀಪಸ್ತಂಭಗಳಿಂದಲೂ ಬೆಳಗುತ್ತಲಿರುವ ಮಂಟಪದ ಮಧ್ಯ ಭಾಗದಲ್ಲಿ ಸರ್ವಮಂಗಳ ಸ್ವರೂಪಿಯಾದ ಸಿದ್ಧಿವಿನಾಯಕ ಗಣಪತಿಯ ವಿಗ್ರಹವು ವಿರಾಜಿಸುತ್ತಲಿರಲಾಗಿ, ಪುರೋಹಿತರು ಉಚ್ಚಸ್ವರದಲ್ಲಿ, ಮಂತ್ರವನ್ನು ಜಪಿಸುತ್ತಾ 'ಝುಣ ಝುಣ'ವೆಂದು ಗಂಟೆ ಬಾರಿಸುತ್ತಾ ಪೂಜೆ ಮಾಡುತ್ತಲಿದ್ದರು. ಹಲವು ವಿಧವಾದ ಹಣ್ಣು ಹಂಪಲುಗಳೂ, ಫಲಪುಷ್ಪ ತಾಂಬೂಲಾದಿಗಳೂ, ಕಡುಬು ಕಜ್ಜಾಯ ಮುಂತಾದ ಪಂಚ ಭಕ್ಷ್ಯ ಪರಮಾನ್ನಾದಿಗಳೂ ಮಂಟಪದ ಮುಂಭಾಗದಲ್ಲಿ ನೈವೇದ್ಯಕ್ಕಾಗಿ ಸಿದ್ಧವಾಗಿ ಇರಿಸಲ್ಪಟ್ಟಿದ್ದವು. ಆ ಸಮಯದಲ್ಲಿ ಪುಟ್ಟದೊಂದು ಪೀತಾಂಬರವನ್ನುಟ್ಟು ಅಂಜಲೀಬದ್ಧನಾಗಿ ನಿಂತು ಪೂಜೆಯನ್ನೂ, ದೇವ ದೇವನನ್ನೂ ಎವೆಯಿಕ್ಕದೆ ಉತ್ಸಾಹದಿಂದ ನೋಡುತ್ತ ನಿಂತಿದ್ದ ಶ್ರೀಧರನು ಹಠಾತ್ತನೆ ಯಾವುದನ್ನೋ ಜ್ಞಾಪಿಸಿಕೊಂಡವನಂತೆ ಅಂಗಳದ ಕಡೆಗೆ ಓಡಿದನು.

ಅಲ್ಲಿ ಎಂದಿನಂತೆ ಸಿದ್ದನು ನಲ್ಲಿಯ ನೀರಿನಲ್ಲಿ ಆಡುತ್ತಿರಲಾಗಿ, ಕೆಂಪಿಯು ದನದ ಕೊಟ್ಟಿಗೆಯನ್ನು ಗುಡಿಸುತ್ತಲಿದ್ದಳು. "ಲೋ ಸಿದ್ದಾ,

ಈವತ್ತು ನಮ್ಮ ಮನೆಯಲ್ಲಿ ಗಣೇಶನ ಹಬ್ಬ ; ನಿಮ್ಮ ಮನೆಯಲ್ಲಿಲ್ಲವೇ ?" ಎಂದನು ಶ್ರೀಧರನು.

'ನಾವು ಬಡವರು ಬುದ್ಧೀ! ನಮ್ಮನೇಲಿ ಹಬ್ಬಿಲ್ಲಾ ಬುದ್ಧೀ' ಎಂದಳು ಕೆಂಪಿ.

"ಬಡವರೆಂದರೇ ?"

"ಬಡವರೆಂದರೆ, ನಮಗೆ ಸಾಕಷ್ಟು ಹಣವಿಲ್ಲ, ಅಂಗಡೀಗೆ ಹೋಗಿ ಹಣ್ಣು ಕಾಯಿ ತಂದು ದೇವರಿಗೆ ಪೂಜೆಮಾಡೋಕೆ" ಎಂದು ಹೇಳಿ ಕೆಂಪಿಯು ಅಲ್ಲಿಂದ ಬಚ್ಚಲ ಮನೆಯನ್ನು ತೊಳೆಯಲು ಹೋಗಿ ಬಿಟ್ಟಳು.

ಶ್ರೀಧರನಿಗೆ ಮನಸ್ಸಿನಲ್ಲಿ ಕ್ಷಣಮಾತ್ರದಲ್ಲಿ ಒಂದು ಯೋಚನೆ ಹೊಳೆಯಿತು. 'ದೇವರು ಏಕೆ ಸಿದ್ದನನ್ನೂ ಕೆಂಪಿಯನ್ನೂ ಬಡವರನ್ನಾಗಿಮಾಡಿ ನಮ್ಮನ್ನು ಮಾತ್ರ ಹಣವಂತರನ್ನಾಗಿ ಮಾಡಿದ್ದಾನೆ? ಸಿದ್ದನನ್ನು ಈವತ್ತು ನಮ್ಮ ಗಣೇಶನಿಗೆ ನಮಸ್ಕಾರಮಾಡಿ ತನ್ನನ್ನು ಹಣವಂತನನ್ನಾಗಿ ಮಾಡಬೇಕೆಂದು ಬೇಡಿಕೊಳ್ಳೊಂದು ಹೇಳೋಣ' ಎಂಬುದಾಗಿ ಯೋಚಿಸಿ, ಪ್ರಕಾಶವಾಗಿ "ಬಾರೋ ಸಿದ್ದಾ ನಮ್ಮನೇ ದೇವರು ಬಹಳ ಒಳ್ಳೇವರು. ಅವರಿಗೆ ನಮಸ್ಕಾರಮಾಡಿ ಬೇಡಿಕೋ, ಅವರು ನಿನ್ನನ್ನೂ ಹಣವಂತನನ್ನಾಗಿ ಮಾಡುತ್ತಾರೆ. ಬ್ರಾಹ್ಮಣನಾನೂ ಮಾಡ್ತಾರೆ. ನಾವಿಬ್ಬರೂ ಸಂತೋಷವಾಗಿ ಒಟ್ಟಿಗೆ ಒಂದೇ ಮನೇಲಿದ್ದು ಬಿಡೋಣ" ಎಂದು ಆವೇಶ ಬಂದವನಂತೆ ಸಿದ್ದನ ಕೈಹಿಡಿದೆಳದು ಕೊಂಡು ಮನೆಯೊಳಗೆ ಓಡಿದನು.

ಸಿದ್ದನು "ಬ್ಯಾಡಾ ಬುದ್ಧೀ ಅಮ್ಮನೋರು ಕಂಡ್ರೆ ಕೋಪಿಸಿ ಕೊಳ್ಳೋಲ್ಲವ್ರಾ ?" ಎಂದು ಹಲುಬಿದನು.

ಅವನ ಪೇಚಾಟವಾವುದೂ ಶ್ರೀಧರನ ಮನವನ್ನು ಪರಿವರ್ತನ ಗೊಳಿಸಲಿಲ್ಲ. "ಗಲಾಟೆಮಾಡಬೇಡವೋ. ಅಮ್ಮನು ಅಡಿಗೆಯ ಮನೆಯಲ್ಲಿದ್ದಾಳೆ. ಒಂದು ನಿಮಿಷದಲ್ಲಿ ದೇವರಿಗೆ ನಮಸ್ಕರಿಸಿಬಿಟ್ಟು ಓಡಿಬಿಡುವಿಯಂತೆ" ಎಂದು ದೇವರ ಮನೆಯ ಸಮೀಪಕ್ಕೆ ಎಳೆದು ಕೊಂಡು ಹೋದನು.

ಅದೇ ಸಮಯದಲ್ಲಿ ಹೊರಗೆ ಹೋಗಿದ್ದ ಅವನ ತಂದೆ ಶಂಕರ ರಾಯರು ಮನೆಯೊಳಗೆ ಪ್ರವೇಶಿಸಲಾಗಿ, ದೇವರ ಮನೆಯ ಸಮೀಪದಲ್ಲಿ ಕೈ ಜೋಡಿಸಿ ನಿಂತಿರುವ ಬಾಲಕರೀರ್ವರನ್ನೂ ನೋಡಿಬಿಟ್ಟರು. "ಲೋ, ಚಂಡಾಳಾ, ನಿನಗೆ ಇಷ್ಟೊಂದು ಧೈರ್ಯವೇ! ನಿನ್ನನ್ನು ಈಗ ಬೆನ್ನೆಲುಬು ಮುರಿಯುವಂತೆ ಹೊಡೆಯದೆ ಬಿಡುತ್ತೇನೆಯೋ ನೋಡು! ದೇವರ ಮನೆಯ ಬಾಗಿಲವರೆವಿಗೆ ಬರುವಷ್ಟು ಕೂಡ ಧೈರ್ಯ ಹುಟ್ಟಿಬಿಟ್ಟಿತೇನೊ ನಿನಗೆ?" ಎಂದು ಕೈಯಲ್ಲಿದ್ದ ಬೆತ್ತವನ್ನು ಬೀಸುತ್ತಾ ಅವರುಗಳನ್ನು ಸಮೀಪಿಸಿದರು. ಅವರ ಧ್ವನಿಯನ್ನು ಕೇಳಿದೊಡನೆಯೇ ಹೆಬ್ಬುಲಿಯನ್ನು ಕಂಡು ಹೆದರಿದ ಜಿಂಕೆಯ ಮರಿಯಂತೆ ಅಂಗಳದ ಕಡೆಗೆ ಒಂದೇ ಓಟ ತೆಗೆದನು ಸಿದ್ಧ. ರಾಯರು ಸಿದ್ದನನ್ನು ಅಟ್ಟಿಕೊಂಡುಬಂದು ಅವನ ಮೇಲೆ ಬೆತ್ತದ ಪ್ರಹಾರಮಾಡಿದರು. ಅವರ ಹೊಡೆತವನ್ನು ತಾಳಲಾರದೆ ಕಿರಿಚುತ್ತಾ ರಭಸದಿಂದ ಓಡಿಬರುತ್ತಿದ್ದ ಆ ಎಳೆಯ ಬಾಲಕನು ಅಂಗಳದ ಹಜಾರದ ಮೆಟ್ಟಲುಗಳನ್ನು ಇಳಿಯುವಾಗ ಕಾಲುಜಾರಿ 'ಢಂ' ಎಂದು ಬಿದ್ದುಬಿಟ್ಟನು. ಬಲಗಣ್ಣಿನ ಸಮೀಪದಲ್ಲಿ ಹಣೆಯ ಮೇಲೆ ಅಲ್ಲಿ ಬಿದ್ದಿದ್ದ ಕಲ್ಲೊಂದು ತಗಲಿ ಬಲವಾದ ಘಾಯವನ್ನುಂಟುಮಾಡಿಬಿಟ್ಟಿತು. ಮಗುವು ನೋವು ತಡೆಯಲಾರದೆ ಕಿಟ್ಟನೆ ಕಿರಿಚಿಕೊಂಡಿತು.

"ಬೇಕು, ಚೆನ್ನಾಗಿ ಬೇಕು. ರಾಸ್ಕಲಿಗೆ" ಎಂದು ಹೇಳುತ್ತಾ ಕ್ಷಣಕಾಲ ನಿಂತು, ಹಿಂದಿರುಗಿ ಮನೆಯೊಳಗೆ ಹೋಗಿಬಿಟ್ಟರು, ಆ ನಿರ್ದಯ ಮನುಷ್ಯರಾದ ರಾಯರು. ಮಗುವು ಕುಸಿದುಬಿದ್ದು ಕಿರಿಚಿ ಕೊಂಡ ಶಬ್ದವನ್ನು ಕೇಳಿದೊಡನೆಯೇ ಕೆಂಪಿಯು ಬಚ್ಚಲ ಮನೆಯಿಂದ ಗಡಗಡನೆ ನಡುಗುತ್ತಾ ಒಂದೇ ಸಮನೆ ಓಡಿಬಂದಳು.

ಮಗುವಿನ ಕರುಣಾಜನಕವಾದ ಪರಿಸ್ಥಿತಿಯನ್ನು ಕಂಡು ಕೈಯಲ್ಲಿದ್ದ ತಂಬಿಗೆಯನ್ನೂ ಪೊರಕೆಯನ್ನೂ ಕೆಳಗೆ ಬಿಸುಟು ನಡುಗುವ ಕೈಗಳಿಂದ ಮಗುವನ್ನು ಬಾಚಿ ಎದೆಗೆ ಅಪ್ಪಿಕೊಂಡು ತನ್ನ ಸೀರೆಯ ಸೆರಗನ್ನು ನೀರಿನಲ್ಲದ್ದಿ ಘಾಯದ ಮೇಲಿಟ್ಟು ಅದುಮಿದಳು. ಆದರೂ ಕೂಡ ರಕ್ತವು ಅತೀತವಾಗಿ ಹೊಮ್ಮಿ ಸುರಿಯುತ್ತಲಿದ್ದಿತು. ವಿಷಯವನ್ನರಿತ ಪಾರ್ವತಿಯು ಅಲ್ಲಿಗೆ ಬಂದು "ಇಂತಹ ಅಕ್ರಮ ಕಾರ್ಯವನ್ನು

ಮಾಡಿದರೆ ಹಾಗೇ ಆಗಬೇಕು. ಇಕೋ ಈ ಕುಂಕುಮವನ್ನು ಘಾಯ ದಲ್ಲಿಟ್ಟು ಅದುಮು'' ಎಂದು ಕೆಂಪಿಯ ಹತ್ತಿರ ಕುಂಕುಮದ ಪೊಟ್ಟ ಣವೊಂದನ್ನು ಎಸೆದುಬಿಟ್ಟು ಒಳಗೆ ಹೊರಟುಹೋದಳು. ಶ್ರೀಧರನು ಅಂಗಳದಲ್ಲೊಂದು ಕಡೆಯಲ್ಲಿ ನಿಂತಿದ್ದನು. ಕೆಂಪಿಯು ತನ್ನ ಹಣೆಯ ಬರಹವನ್ನು ಬೈದುಕೊಳ್ಳುತ್ತಾ ಮಗುವನ್ನು ಹೆಗಲಮೇಲೆ ಹಾಕಿಕೊಂಡು ಆಸ್ಪತ್ರೆಗೆ ಓಡಿದಳು.

ಮತ್ತೆ ಕೆಂಪಿಯು ರಾಯರ ಮನೆಯ ಕಡೆಯೇ ಸುಳಿಯಲಿಲ್ಲ. ಶ್ರೀಧರನಾದರೋ ''ಇಂದು ಸಿದ್ದನು ಬರಬಹುದು. ಇಂದು ಸಿದ್ದನು ಬರಬಹುದು'' ಎಂದು ನಿರೀಕ್ಷಿಸಿ ನಿರೀಕ್ಷಿಸಿ ಏಮಾರಿಕೆ ಹೊಂದಿದನು. ಅವನ ಹೃದಯವು ಸಿದ್ದನಿಗಾಗಿ ಬಹಳವಾಗಿ ತವಕಪಡುತ್ತಲಿದ್ದಿತು. ಆದರೆ ಅವನ ಮಾತಾಪಿತೃಗಳಾದರೋ ಆ ದೀನರ ಪರವಾಗಿ ಲೇಶ ಮಾತ್ರವೂ ಚಿಂತಿಸಲಿಲ್ಲ. ಕೆಂಪಿಯು ನಿಂತುಹೋದ ಮಾರನೆಯ ದಿವಸವೇ ಮತ್ತೊಬ್ಬ ಮುಸುರೆಯವಳು ಬಂದುದಾಯಿತಲ್ಲಾ, ಇನ್ನು ಏಕೆ ಅವರಿಗೆ ಅವಳ ಚಿಂತೆ.

ಹತ್ತು ವರ್ಷಗಳು ಉರುಳಿದವು. ಈಗ ಶ್ರೀಧರನ ಮಾತಾಪಿತೃ ಗಳು ತಮ್ಮ ಏಕಪುತ್ರನ ವಿದ್ಯಾಭ್ಯಾಸದ ನಿಮಿತ್ತವಾಗಿ ಗ್ರಾಮವನ್ನು ತೊರೆದು ಬೆಂಗಳೂರಿನಲ್ಲಿ ವಾಸವಾಗಿದ್ದರು. ಶ್ರೀಧರನು ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ವ್ಯಾಸಂಗ ಮಾಡುತ್ತಲಿರುವನು.

* * * *

ಅಂದು ಬೆಂಗಳೂರಿನ ಸೆಂಟ್ರಲ್ ಕಾಲೇಜಿನ ಕ್ರಿಕೆಟ್ ಟೀಮಿನವ ರಿಗೂ ಮದ್ರಾಸಿನ ಪ್ರೆಸಿಡೆನ್ಸೀ ಕಾಲೇಜಿನ ಕ್ರಿಕೆಟ್ ಟೀಮಿನವರಿಗೂ ಮ್ಯಾಚು. ಈಗಾಗಲೇ ಅನೇಕಾನೇಕ (ಮ್ಯಾಚುಗಳಲ್ಲಿ) ಪಂದ್ಯಗಳಲ್ಲಿ ತನ್ನ ಕಾಲೇಜಿಗೆ ಜಯಭೇರಿಯನ್ನು ತಂದಿದ್ದ ಶ್ರೀಧರನು ಅತ್ಯಂತ ಹುರುಪು ಉತ್ಸಾಹದೊಡನೆ ತನ್ನ ಶಕ್ತಿಗೆ ಮೀರಿ ಆಟವಾಡುತ್ತಿರಲಾಗಿ ಕ್ರಿಕೆಟ್ ಚೆಂಡು ಬಾಂಬಿನೋಪಾದಿಯಲ್ಲಿ ಅತ್ಯಂತ ರಭಸದಿಂದ ಬಂದು ಅವನ ಹಣೆಯ ಮೇಲೆ ಬಡಿದುಬಿಟ್ಟಿತು. ತಕ್ಷಣ ಜ್ಞಾನತಪ್ಪಿ ಹೋಗ

ಲಾಗಿ "ಧಡಂ" ಎಂದು ಬಿದ್ದುಬಿಟ್ಟನು. ಹಣೆಯ ಗಾಯದಿಂದ ರಕ್ತ ಪ್ರವಾಹವು ಅತೀತವಾಗಿ ಹೊರಹೊಮ್ಮಿ ಸುರಿಯಲಾರಂಭಿಸಿತು. ಸ್ವಲ್ಪ ಕಾಲ First Aid ಚಿಕಿತ್ಸೆಗಳನ್ನು ಮಾಡಿದನಂತರ ಜ್ಞಾನತಪ್ಪಿದಂತೆಯೇ ಅವನನ್ನು ವಿಕ್ಟೋರಿಯಾ ಆಸ್ಪತ್ರೆಗೆ ಸಾಗಿಸಲಾಯಿತು. ಅವನ ಮಾತಾ ಪಿತೃಗಳಿಗೂ ವಿಷಯ ತಿಳಿಸಿ ಅವರನ್ನೂ ಕರೆಸಿದುದಾಯಿತು. ರಾತ್ರಿಯ ಕಾಲವು ಸಮೀಪಿಸುತ್ತಾ ಸಮೀಪಿಸುತ್ತಾ ಅವನ ಪರಿಸ್ಥಿತಿಯು ಬಹಳ ಚಿಂತಾಜನಕವಾಗಿ ಕಂಡುಬರುತ್ತಲಿದ್ದಿತು. ಡಾಕ್ಟರುಗಳೇ ಅಧೈರ್ಯ ತಂದುಕೊಂಡ ನಂತರ ಹೆತ್ತವರ ಪಾಡನ್ನು ಇಂತೆಂದು ವಿವರಿಸಲು ಸಾಧ್ಯವೇ? ಡಾಕ್ಟರುಗಳು ತಮ್ಮಿಂದ ಸಾಧ್ಯವಾದಷ್ಟೂ ಚಿಕಿತ್ಸೆಗಳನ್ನು ಮಾಡಿ ನೋಡಿದನಂತರ "ಘಾಬರಿಯಿಂದ ಬಹಳವಾಗಿ ರಕ್ತಶ್ರಾವ ವಾಗಿರುವುದರಿಂದ, ಹುಡುಗನು ಬಹಳವಾಗಿ ಕ್ಷೀಣಿಸುತ್ತಲಿದ್ದಾನೆ. ಬೇರೊಬ್ಬರ ದೇಹದಿಂದಲಾದರೂ ಹತ್ತು ಔನ್ಸ್ ರಕ್ತವನ್ನು ತೆಗೆದು ಅವನ ದೇಹದಲ್ಲಿ ಪ್ರಯೋಗಿಸಿದರೆ ಬದುಕುವ ಸಂಭವವುಂಟು. ನಿಮ್ಮಿಬ್ಬ ರಲ್ಲಿ ಯಾರು ರಕ್ತವನ್ನು ಕೊಡುತ್ತೀರಿ?" ಎಂದು ಅವನ ತಂದೆ ತಾಯಿ ಯರನ್ನು ಕುರಿತು ಕೇಳಿದರು. ಅವರಿಬ್ಬರೂ ಕಣ್ಣುಕಣ್ಣು ಬಿಡುತ್ತಾ "..ರ..ಕ್ತ..ವೆ?" ಎಂದು ರಾಗ ಎಳೆದರು. ಅವರುಗಳಿಗೆ ಅದು ನೂತನವಾಗಿ ಕಂಡುಬಂದಿತು. ಪುನಃ ಡಾಕ್ಟರು ಅವರ ಸಮ್ಮತಿಯನ್ನು ಕೇಳಿದರು. ಅವರುಗಳು, ಇದಕ್ಕೆ ಮೊದಲು ಅಂತಹ ವಿಷಯವನ್ನು ಕೇಳಿದ್ದರಲ್ಲವೇ? ಈರ್ವರೂ ಉತ್ತರವಾವುದನ್ನೂ ಕೊಡಲಿಲ್ಲ.

ಶ್ರೀಧರನಿಗೆ ಶಿಶ್ರೂಷೆ ಮಾಡುತ್ತ ನಿಂತಿದ್ದ ವಾರ್ಡ್‌ಬಾಯಿಯು, ತಟ್ಟನೆ ಡಾಕ್ಟರರ ಇದಿರಿಗೆ ನಿಂತು "ಡಾಕ್ಟರ್, ಡಾಕ್ಟರ್! ಇಕೋ ನನ್ನ ಮೈಯಿಂದ ರಕ್ತವನ್ನು ತೆಗೆದುಕೊಳ್ಳಿ" ಎಂದನು. ಅವನೊಬ್ಬ ನವ ಯುವಕನು. ತಾರುಣ್ಯಕ್ಕೆ ತಕ್ಕಂತೆ ಅವನ ದೇಹವು ದೃಢ ವಾಗಿಯೂ, ಪೂರ್ಣಾರೋಗ್ಯದಿಂದ ಕೂಡಿದುದಾಗಿಯೂ ಕಂಡುಬಂದಿತು. ನೋಡಿದರು ಡಾಕ್ಟರು. ತಕ್ಷಣ ಆ ತರುಣನನ್ನು ರೋಗಿಯ ಸಮೀಪ ದಲ್ಲಿ ಹಾಕಿದ್ದ ಮಂಚವೊಂದರಲ್ಲಿ ಮಲಗಿಸಿ ಅವಶ್ಯಕವಾದ ಆಯುಧೋಪ ಕರಣಗಳ ಮೂಲಕವಾಗಿ ಅವನ ದೇಹದಿಂದ ಹತ್ತು ಔನ್ಸ್ ಪ್ರಮಾಣ

ವಾದ ರಕ್ತವನ್ನು ತೆಗೆದು ರೋಗಿಯ ಮೈಯಲ್ಲಿ ಸೂಜಿಯ ಮೂಲಕ ವಾಗಿ ಪ್ರಯೋಗಿಸಿಬಿಟ್ಟರು. ಶ್ರೀಧರನ ಮಾತಾಪಿತೃಗಳು ಕಕ್ಕಾಬಿಕ್ಕಿಯಾಗಿ ದಿಗ್ಭ್ರಮೆಯೊಡನೆ ನಿಂತಲ್ಲಿಯೇ ನಿಂತಿದ್ದರು. ಅರ್ಧಗಂಟೆಯೊಳಗಾಗಿಯೇ ವೈದ್ಯರ ವದನದಲ್ಲಿ ವಿಜಯ ಚಿಹ್ನೆಯು ಪಸರಿಸಿತು. "ಹಾ, ಬದುಕಿಬಿಟ್ಟನು" ಎಂದು ಮಿತಿಮೀರಿದಾನಂದದಿಂದ ಬಾಯಿಬಿಟ್ಟು ನುಡಿದುಬಿಟ್ಟರು. ಆ ವಾರ್ಡ್‌ಬಾಯಿಯು "ನನ್ನ ಶ್ರೀಧರನು ಬದುಕಿಬಿಟ್ಟನಾ ಡಾಕ್ಟರ್?" ಎಂದು ಕಾತುರದಿಂದ ಹಾಸಿಗೆಯಿಂದ ಏಳಲು ಪ್ರಯತ್ನಿಸಿದನು. "ಅಪ್ಪಾ, ಸ್ವಲ್ಪ ವಿಶ್ರಮಿಸಿಕೊ ಆಮೇಲೆ ಸುಸ್ತಾಗಿ ಬಿಟ್ಟೀತು" ಎಂದು ಡಾಕ್ಟರ್ ಅವನನ್ನು ಮತ್ತೆ ಮಲಗಿಸಿ ತಯಾರಾಗಿ ನಿಂತಿದ್ದ ದಾದಿಯರ್ವಳ ಕೈಯಲ್ಲಿ ಅವನಿಗೆ ಒಂದಿಷ್ಟು ಕಾಫಿಯನ್ನು ಕುಡಿಸಿದರು.

ಹುಡುಗನ ಮಾತನ್ನು ಕೇಳಿದೊಡನೆ ಶ್ರೀಧರನ ಮಾತಾಪಿತೃಗಳೀರ್ವರೂ ಆಶ್ಚರ್ಯ ಚಕಿತರಾಗಿ ಆ ಹುಡುಗನನ್ನು ಸಮೀಪಿಸಿ ಅವನಾರಿರಬಹುದೆಂದು ದಿಟ್ಟಿಸಿ ನೋಡಿದರು. ಬಲಗಣ್ಣಿನ ಮೇಲೆ ಹಣೆಯಲ್ಲೊಂದು ದೊಡ್ಡ ಘಾಯದ ಮಚ್ಚೆ ಇರಲಾಗಿ "ಸಿದ್ದಾ...... ನೀ..ನೇ..ನಮ್ಮ ಮಗುವಿಗೆ ಪ್ರಾಣಭಿಕ್ಷೆ ಇತ್ತೆ. ಅಯ್ಯೋ ಅಂದು ನಿನ್ನನ್ನು ಹೊಡೆದೋಡಿಸಿದ ಪಾತಕನಲ್ಲವೆ ನಾನು?" ಎಂದು ಶಂಕರರಾಯರು ಹಲುಬಿದರು. ಪಾರ್ವತಿಯು "ನಾನಿಂದು ಎರಡು ಮಕ್ಕಳನ್ನು ಹೆತ್ತೆ. ನಮ್ಮ ಸ್ವಂತ ಮಗುವಿಗೇ ನಾವು ರಕ್ತ ಕೊಡಲು ಹಿಂದುಮುಂದು ನೋಡಿದೆವಲ್ಲಾ. ಜಾತಿ ಜಾತಿ ಎಂದು ಹೊಡೆದುಕೊಳ್ಳುತ್ತೇವೆಯಲ್ಲಾ. ಬಾಲಕನು ತನ್ನ ಸ್ನೇಹಬಲದಿಂದ ತನ್ನ ಪ್ರಾಣವನ್ನು ಸಹ ತೃಣಸಮಾನವಾಗಿ ಭಾವಿಸಿ ಸ್ನೇಹಿತನಿಗೆ ರಕ್ತ ಕೊಟ್ಟು ಪ್ರಾಣದಾನವನ್ನಿತ್ತನಲ್ಲಾ. ಪ್ರೇಮದ ಇದಿರಿಗೆ ಜಾತಿಯೆಲ್ಲಿಯದು? ಭೇದವೆಲ್ಲಿಯದು" ಎಂದು ಎಣಿಸಿದವಳಾಗಿ ಬಿಸಿಲು ಮಳೆ ಒಟ್ಟಿಗೆ ಕೂಡಿದಂತೆ ಆನಂದಬಾಷ್ಪವನ್ನೂ ಪಶ್ಚಾತ್ತಾಪದ ಕಣ್ಣೀರನ್ನೂ ಒಮ್ಮೆಲೇ ಸುರಿಸಿದಳು. ಮರುಕ್ಷಣ "ಡಾಕ್ಟರ್, ಡಾಕ್ಟರ್ ನಮ್ಮ ಸಿದ್ದನ ಪ್ರಾಣಕ್ಕೇನೂ ಭಯವಿಲ್ಲವಲ್ಲಾ?" ಎಂದು ದಂಪತಿಗಳೀರ್ವರೂ ಗಾಬರಿಯಿಂದ ಏಕಕಂಠದಲ್ಲಿ ಕೇಳಲಾಗಿ, ವೈದ್ಯರು "ಪ್ರಾಣಭಯವೇನೂ ಇಲ್ಲ. ಹೆದರಬೇಡಿ. ಆದರೆ ಈ ಹುಡುಗ

ನಂತೆ ಸಹೃದಯದಿಂದ ರಕ್ತಕೊಡಲು ಬರುವವರು ತೀರ ವಿರಳವೇ ಸರಿ. ಇಂದು ಈ ಹುಡುಗನು ಪುಣ್ಯವನ್ನು ಕಟ್ಟಿಕೊಂಡನು" ಎಂದರು.

ಅಷ್ಟರೊಳಗಾಗಿ ಶ್ರೀಧರನು ಮರಳಿ ಜ್ಞಾನ ಹೊಂದಿದವನಾಗಿ ಕಣ್ಣು ತೆರೆದು ನೋಡಿದನು. ತನ್ನ ಬಾಲ್ಯ ಸ್ನೇಹಿತನ ಮೂಲಕವೇ ತನಗೆ ಪ್ರಾಣದಾನವಾಯಿತೆಂಬುದನ್ನು ಅವನು ಆ ಕ್ಷಣ ಅರಿಯದಿದ್ದರೂ, ಅವನ ದರ್ಶನವೇ ಅವನಿಗೊಂದು ಟಾನಿಕ್ ಆಗಿ ಪರಿಣಮಿಸಿತು.

ಆ ದಂಪತಿಗಳಿರ್ವರು ತಮ್ಮ ಹಿಂದಿನ ಅಜ್ಞಾನವನ್ನು ಕುರಿತು ಮರಳಿ ಮರಳಿ ನೆನೆದುಕೊಂಡವರಾಗಿ, ಪಶ್ಚಾತ್ತಾಪವೆಂಬ ಅಗ್ನಿಜ್ವಾಲೆಯಲ್ಲಿ ಬೆಂದು ಬಳಲಿದರು.

---

# ದಾದಿ ಲಕ್ಷ್ಮಿ

ಲಕ್ಷ್ಮಿಯು ಉಷಾ ಕುಮಾರಿಯ ದಾದಿ. ಏಕೆ? ಅವಳನ್ನು ಸಾಕಿ ಸಲಹುವ ಸಾಕ್ಷಾತ್ ತಾಯಿಯೆಂದೇ ಹೇಳಬಹುದು. ಜಾನಕಿಯಂತೂ ಶ್ರೀ ಕೃಷ್ಣಪರಮಾತ್ಮನ ಮಾತೆಯಂತೆ ಉಷೆಗೆ ಹೆತ್ತ ತಾಯಿಯೇ ಹೊರತು ಉಷೆಯ ಪಾಲಿಗೆ ಲಕ್ಷ್ಮಿಯೇ ಯಶೋದೆಯಾಗಿ ಪರಿಣಮಿಸಿದಳು. ಅವಳು ಜಾನಕಿಯ ಸಾಮಾಜಿಕ ಜೀವನಕ್ಕೆ (Social life) ಕುಂದುಬಾರದಂತೆ ಉಷೆಯನ್ನು ನೋಡಿಕೊಳ್ಳುವುದಕ್ಕಾಗಿ ಸಂಬಳಕ್ಕೆ ನಿಯಮಿಸಲ್ಪಟ್ಟ ದಾದಿಯೇನೋ ಹೌದು. ಆದರೆ ಅವಳು ತಾನು ಕೇವಲ ಸಂಬಳದ ದಾದಿಯೆಂದು ಎಣಿಸದೆ ಉಷೆಯನ್ನು ತನ್ನ ಸ್ವಂತ ಮಗುವಿಗಿಂತಲೂ ಹೆಚ್ಚಾಗಿ ಭಾವಿಸಿ ಅತ್ಯಂತ ಪ್ರೀತಿಯಿಂದ ಕಾಣುತ್ತಿದ್ದಳು. ಸಮುದ್ರದಲ್ಲಿ ಬಿದ್ದು ಆಸರೆಯೊಂದೂ ಸಿಗದೆ, ಈಜಲು ಸಹ ಬಾರದೆ ಪರಿತಪಿಸುತ್ತಲಿರುವ ಮನುಷ್ಯನೋರ್ವನಿಗೆ ಸಮುದ್ರದಲ್ಲಿ ತೇಲಾಡುತ್ತಲಿದ್ದ ಒಂದು ಮರದ ತುಂಡಿನ ಆಸರೆಯು ಸಿಕ್ಕಿದಂತೆ, ಆ ಅನಾಥಳಿಗೆ ಉಷೆಯು ದೊರಕಿದಳು. ತನ್ನ ಹೃದಯದಲ್ಲಿ ಅಡಗಿದ್ದ ಪ್ರೇಮವೆಂಬ ಅಮೃತವರ್ಷವನ್ನೆಲ್ಲಾ ಆ ಮಗುವಿಗೆ ಅಭಿಷೇಕ ಮಾಡಿ ಲಕ್ಷ್ಮಿಯು ಅದನ್ನು ತನ್ನ ಕಣ್ಮಣಿಯಂತೆ, ತನ್ನ ಪ್ರಾಣಪದಕದಂತೆ, ತನ್ನ ಸಕಲ ಸಂಪತ್ತೂ ಅವಳೇ ಎಂದು ನೋಡಿಕೊಳ್ಳುತ್ತಿದ್ದಳು. ಉಷೆಯು ಹುಟ್ಟಿದಾರಭ್ಯ ಲಕ್ಷ್ಮಿಯ ತೊಡೆಯಲ್ಲಿಯೇ ಆಡಿ ಪಾಡಿ ಬೆಳೆದಳು.

ಈಗ ಉಷಾಕುಮಾರಿಗೆ ನಾಲ್ಕು ವರ್ಷ ವಯಸ್ಸು. ಮನೆಯಲ್ಲಿ ಮಿಕ್ಕವರಿಗೆಲ್ಲ ದಾದಿ ಲಕ್ಷ್ಮಿಯು ಸೇವಕಳಾಗಿ ಕಾಣುತ್ತಿದ್ದಳೇ ಹೊರತು ಉಷೆಯಪಾಲಿಗೆ ಅವಳು ತನ್ನ ಸ್ವಂತ ತಾಯಿಗಿಂತಲೂ ನೂರುಪಾಲು ಅಧಿಕ ಸಂಬಂಧಿಯಾಗಿ ತೋರಿದಳು. ಅಮ್ಮನು ತನಗೆ ಬಿಸ್ಕಟ್ ಕೊಟ್ಟರೆ "ಅಮ್ಮಾ ಆಯಾಗೂ ಕೊಡೆ" ಎಂದು ಅತ್ತು ಕರೆದು ಒಂದು ಬಿಸ್ಕಟ್ಟನ್ನು ತಂದು ಲಕ್ಷ್ಮಿಗೆ ಕೊಡುವಳು. ಅವಳು ಉಷೆಯನ್ನೇ

ತಿನ್ನಹೇಳಿ ಹಿಂದಕ್ಕೆ ಕೊಟ್ಟಲ್ಲಿ, ಅದನ್ನು ಆಯಾ ಬಾಯಲ್ಲಿ ಬಲವಂತವಾಗಿ ತುರಿಕಿ ತಿನ್ನಿಸುವಳು. ತಾನು ತನ್ನ ತಾಯಿ ತಂದೆಯರೊಡನೆ ಯಾವ ಊರಿಗಾದರೂ ಹೊರಟರೂ ಕೂಡ, ಲಕ್ಷ್ಮಿಯೂ ತಮ್ಮ ಸಂಗಡ ಬರಬೇಕೆಂದು ಹಠ ಹಿಡಿಯುವಳು. ಲಕ್ಷ್ಮಿಯನ್ನು ಕರೆದುಕೊಂಡು ಹೋಗಲಾಗದೆಂದು ಉಷೆಯ ಮಾತಾಪಿತೃಗಳು ಸಮಾಧಾನ ಹೇಳಿದಲ್ಲಿ, ಹೊರಡುವಾಗ "ಆಯಾ! ಅಳಬೇಡಮ್ಮಾ, ನಾನು ನಿಂಗೆ ಊರಿನಿಂದ ಹೊಸ ಚೀಲ, ಎಲೆ, ಅಡಿಕೆ, ಎಲ್ಲಾ ಕೊಂಡುಕೊಂಡು ಕೊಲುತ್ತೀನಿ" ಎಂದು ಉಷೆಯು ತನ್ನ ದಾದಿಗೆ ಸಮಾಧಾನ ಹೇಳಿ ಹೋಗುವಳು. ಆ ಎಳೆಯ ಕೂಸಿನ ಎಳೆಯ ಹೃದಯದಲ್ಲಿತಾನೇ ಅದೆಂತಹ ಅಗಾಧವಾದ ಪ್ರೇಮವೂ ಅನುಪಮವಾದ ಜ್ಞಾಪಕಶಕ್ತಿಯೂ ಹುದುಗಿಕೊಂಡಿದೆ! ಹೋದ ತಕ್ಷಣ ಅಮ್ಮನನ್ನು ಪೀಡಿಸಿ ಅಂಗಡಿಯಿಂದ ಒಂದು ಎಲೇ ಅಡಿಕೆಯ ಚೀಲವನ್ನು ತರಿಸಿಕೊಂಡು ಅದರಲ್ಲಿ ಎಲೆ ಅಡಿಕೆ ಸುಣ್ಣ ಎಲ್ಲವನ್ನೂ ಕ್ರಮವಾಗಿ ತೆಗೆದು ತುಂಬಿ, ತನ್ನ ಕೈಯಲ್ಲಿಯೇ ಭದ್ರವಾಗಿ ಹಿಡಿದುಕೊಂಡಿರುವಳು. ಹಗಲಿರಳೂ ಆ ಚೀಲವು ಅವಳ ಕೈಯಲ್ಲಿಯೋ ಅಥವಾ ಅವಳ ಅಂಗಿಯ ಜೇಬಿನಲ್ಲಿಯೋ ಇರಬೇಕು. ಅದು ಕಾಣದೇಹೋದಲ್ಲಿ ಆ ಮಗುವಿನ ಪೇಚಾಟ ಹೇಳತೀರದು. ಊರಿಗೆ ಹಿಂದಿರುಗಿ ಬಂದ ತಕ್ಷಣ ಅದನ್ನು ಭದ್ರವಾಗಿ ತಂದು ಲಕ್ಷ್ಮಿಯ ವಶಕ್ಕೆ ಒಪ್ಪಿಸಿ ಲಕ್ಷ್ಮಿಯ ಕೊರಳನ್ನು ಕಟ್ಟಿಕೊಂಡು ಅವಳ ಕೆನ್ನೆಗಳಲ್ಲಿ ನೂರಾರು ಮುತ್ತುಗಳನ್ನು ಕೊಟ್ಟು ಸಂತೋಷದಿಂದ ಕುಣಿದಾಡುವಳು. ಇಂತಹ ಪ್ರೇಮದ ಕಾಣಿಕೆಗಳಾದ ವಿವಿಧ ಬಣ್ಣದ ಹಲವು ಪುಟಾಣಿ ಚೀಲಗಳು ಲಕ್ಷ್ಮಿಯ ಪೆಟ್ಟಿಗೆಯಲ್ಲಿ ಭದ್ರವಾಗಿದ್ದವು.

ಹೀಗಿರುವಲ್ಲಿ ಉಷಾಕುಮಾರಿಯ ತಂದೆಯವರಾದ ಭೀಮರಾಯರಿಗೆ ಯುದ್ಧಕಾಲದ ಪರಿಸ್ಥಿತಿಗನುಗುಣವಾಗಿ ವರಮಾನವು ದಿನದಿನಕ್ಕೆ ಕಡಿಮೆಯಾಗುವುದಕ್ಕೂ, ಖರ್ಚು ಹೆಚ್ಚುವುದಕ್ಕೂ ಪ್ರಾರಂಭವಾಯಿತು. ಮನೆಯಲ್ಲಿ ಅಡಿಗೆಯವನೊಬ್ಬ, ಮುಸುರೆಯವಳೊಬ್ಬಳು, ದಾದಿ ಲಕ್ಷ್ಮಿಯೊಬ್ಬಳು, ಮೋಟರ್ ಡ್ರೈವರೊಬ್ಬ, ಸೇವಕರಿಬ್ಬರು ಇಷ್ಟುಮಂದಿ ಆಳುಗಳನ್ನಿಟ್ಟುಕೊಂಡು ಹಣ ವೆಚ್ಚಮಾಡಲು ಕ್ರಮೇಣ ರಾಯರಿಗೆ

ಕಷ್ಟಸಾಧ್ಯವಾಯಿತು. ಅಡಿಗೆಯವನೂ, ಮುದುಕಿಯವಳೂ ಇದ್ದೇ ಇರಬೇಕು. ಸೇವಕರಿಲ್ಲದೆ ಸಾಧ್ಯವಿಲ್ಲ, ತಾವೇ ಡ್ರೈವಿಂಗ್ ಕಲಿತುಕೊಂಡು ಡ್ರೈವರನ್ನು ಕಳುಹಿಸಿಬಿಟ್ಟರು. ಮಗುವು ದೊಡ್ಡವಳಾಗಿಬಿಟ್ಟಳಾದುದ ರಿಂದ ಇನ್ನುಮೇಲೆ ದಾದಿಯ ಅವಶ್ಯಕತೆಯೂ ಇಲ್ಲ. ಸೇವಕರೇ ಮಗು ವನ್ನು ಸುದಾರಿಸಬಲ್ಲರು. ಆದುದರಿಂದ ಲಕ್ಷ್ಮಿಯನ್ನು ಕೆಲಸದಿಂದ ಹೊರಡಿಸಿಬಿಟ್ಟಲ್ಲಿ ತಿಂಗಳಿಗೆ ಹತ್ತು ರೂಪಾಯಿಗಳ ಖರ್ಚು ಮಿಗುವುದು. ಆದರೆ ಅವಳನ್ನು ಯಾವ ರೀತಿಯಲ್ಲಿ ತಟ್ಟನೆ ಕೆಲಸ ಬಿಟ್ಟು ಹೊರಟು ಹೋಗೆಂದು ಹೇಳುವುದೆಂದು ಪೇಚಾಡಿದರು. ಅವಳ ಹತ್ತಿರ ದೋಷ ವೊಂದೂ ಕೂಡ ಇಲ್ಲ. ಅದಲ್ಲದೆ ಅವಳು ಉಷಾಕುಮಾರಿಯು ಹುಟ್ಟಿ ದಾರಭ್ಯ ಮಗುವನ್ನು ಅಷ್ಟೊಂದು ಪ್ರೀತಿವಾತ್ಸಲ್ಯದೊಡನೆ ನೋಡಿ ಕೊಳ್ಳುತ್ತಲಿರುವಳು. ಮಗುವೂ ಕೂಡ ಲಕ್ಷ್ಮಿಯನ್ನು ಅಧಿಕವಾಗಿ ಪ್ರೀತಿಸುತ್ತಿತ್ತೆಂದು ಈ ಮೊದಲೇ ತಿಳಿಸಿದೆ. ಉಷೆಯು ದಾದಿಯನ್ನು ಅರ್ಧ ಘಳಿಗೆಯೂ ಕೂಡ ಬಿಟ್ಟು ಅಗಲಿ ಇರುತ್ತಿರಲಿಲ್ಲ. ಈ ಕಾರಣ ಗಳಿಂದ ರಾಯರು ಮುದುಕಿಯನ್ನು ಕಳುಹಿಸಲು ಮನಸ್ಸು ಬಾರದೆ ಸುಮ್ಮನಿದ್ದುಬಿಟ್ಟರು.

ಆದರೆ ಜಾನಕಿಯಾದರೋ ಬರುಬರುತ್ತಾ ಆ ಮುದುಕಿಯಮೇಲೆ ಅಸೂಯೆಪಡಲಾರಂಭಿಸಿದಳು. ಕೇವಲ ಮಗುವನ್ನು ನೋಡಿಕೊಳ್ಳು ವುದಕ್ಕಾಗಿ ನಿಯಮಿಸಿದ ಈ ಮುದಿಗೂಬೆಯು ತನ್ನ ಮಗುವಿನ ಮನಸ್ಸನ್ನು ತನ್ನಿಂದ ಅವಳ ಕಡೆಗೆ ಸೆಳೆದುಕೊಳ್ಳಲು ಪ್ರಯತ್ನಿಸು ತ್ತಿರುವಳೆಂದು ಜಾನಕಿಗೊಂದುರೀತಿಯಾದ ಅಸಮಾಧಾನ ಏರ್ಪಟ್ಟಿತು. ಉಷೆಯು ಹಠ ಹಿಡಿದು ಅಳುತ್ತಿದ್ದಲ್ಲಿ ಆಗ ಲಕ್ಷ್ಮಿಯು ಏನಾದರೂ ಕೆಲಸದಲ್ಲಿದ್ದರೆ ಜಾನಕಿಯು ಬಂದು ಮಗುವನ್ನು ಸಂತೈಸುವಳು. ಆದರೆ ಅವಳು ಎಷ್ಟೊಂದು ಪ್ರಯತ್ನಪಟ್ಟರೂ ಸಹ ಸಫಲವಾಗುತ್ತಿರಲಿಲ್ಲ. ಉಷೆಯ ಕೈಗಳ ತುಂಬ ಪೆಪ್ಪರ್‌ಮೆಂಟ್‌ಗಳೂ ಚಾಕಲೇಟು ವಗೈರೆಗಳೂ ತುಂಬುವುದೇ ವಿನಃ ಅವಳ ಹಠವೂ ಅಳುವೂ ಶಮನವಾಗುತ್ತಿರಲಿಲ್ಲ. ಆದರೆ ದಾದಿಯು ಬಂದು ಅವಳನ್ನು ಮುದ್ದಿಟ್ಟು, ಒಂದೆರಡು ಸಮಾಧಾ ನೋಕ್ತಿಗಳನ್ನು ಹೇಳುವಷ್ಟರಲ್ಲಿಯೇ ಉಷೆಯ ಹಠವೂ ಅಳುವೂ

ಅದೆಲ್ಲಿಯೋ ಮಾಯವಾಗಿ ಹೋಗಿಬಿಡುತ್ತಿತ್ತು. ಇದನ್ನು ಕಂಡೊಡನೆಯೇ ಜಾನಕಿಯ ಹೃದಯವು ಅಸೂಯೆಯೆಂಬ ಜ್ವಾಲೆಯಿಂದ ಉರಿಯಲಾರಂಭಿಸುವುದು. "ಹತ್ತು ತಿಂಗಳು ಹೊತ್ತು ಹೆತ್ತು ಕಷ್ಟಪಟ್ಟವಳು ನಾನಿರುವಲ್ಲಿ, ಈ ದಾದಿಯ ಜೋರು ಜಾಸ್ತಿಯಾಗಿದೆಯಲ್ಲಾ ! ಇವಳನ್ನು ಮೊದಲು ಮನೆಯಿಂದ ಹೊರಡಿಸಬೇಕು. ಮಗುವನ್ನು ಅನ್ಯಾಯವಾಗಿ ಕೆಡಿಸುತ್ತಾಳೆ" ಎಂದು ಕಿಡಿಕಿಡಿಯಾಗುವಳು ಜಾನಕಿ. ಆದರೆ ಹೆತ್ತವಳ ಪ್ರೇಮದಂತೆಯೇ ಸಾಕುವವಳಿಗೂ ಪ್ರೇಮವಿರುತ್ತದೆ ಎಂಬುದನ್ನು ಅವಳು ಅರಿಯಲಾರದೇಹೋದಳು.

ಕ್ರಮೇಣ ಜಾನಕಿಯ ಹೃದಯದಲ್ಲಿ ಈ ಅಸೂಯೆಯೆಂಬ ಮೊಳಕೆಯು ಬೆಳೆದು ವೃಕ್ಷವಾಯಿತು. ಪ್ರತಿನಿತ್ಯವೂ ದಾದಿಯ ಕೆಲಸಕಾರ್ಯಗಳಲ್ಲಿ ಏನಾದರೊಂದು ಕುಂದನ್ನು ಕಂಡುಹಿಡಿದು ಅವಳನ್ನು ಖಂಡಿಸತೊಡಗಿದಳು. ಆದರೆ ಆ ನಿರಪರಾಧಿಯಾದ ಪ್ರೇಮಮಯಿ ಲಕ್ಷ್ಮಿಯು ಉಷೆಯಮೇಲೆ ತನಗಿದ್ದ ಅತ್ಯಂತವಾದ ಪ್ರೀತಿವಾತ್ಸಲ್ಯದ ದೆಶೆಯಿಂದ ಯಜಮಾನಿಯ ಖಂಡನೆಗಳೆಲ್ಲವನ್ನೂ ಸಹಿಸಿಕೊಂಡು ಇತ್ತ ಕೆಲಸವನ್ನು ಬಿಟ್ಟುಹೋಗಲಾರದೆಯೂ ಅತ್ತ ಕೆಲಸಮಾಡಲಾರದೆಯೂ ಪೇಚಾಡುತ್ತಾ ಕಾಲಹರಣ ಮಾಡುತ್ತಲಿದ್ದಳು.

ಒಂದು ದಿವಸ ಬೆಳಿಗ್ಗೆ ಲಕ್ಷ್ಮಿಯ ಮನೆಗೆ ಅವಳ ದೂರದ ಸಂಬಂಧೀಕರೊಬ್ಬರು ಅಕಸ್ಮಾತ್ತಾಗಿ ಊರಿನಿಂದ ಬಂದಿಳಿದರು. ಅವರೊಡನೆ ಕುಶಲಪ್ರಶ್ನೆಗಳನ್ನು ಮಾಡುತ್ತಾ ತಿಂಡೀತೀರ್ಥಗಳನ್ನು ತಯಾರಿಸಿಕೊಟ್ಟು ಅವರನ್ನು ಉಪಚರಿಸಿಬಿಟ್ಟು, ಅನಂತರದಲ್ಲಿ ಕೆಲಸಕ್ಕೆ ಬರಲು ಸ್ವಲ್ಪ ತಡವಾಯಿತು. ಮನೆಯಿಂದ ಒಂದೇ ಉಸಿರಿನಲ್ಲಿ ಓಡೋಡಿ ಬಂದಳು ಆ ಮುದುಕಿ.

ಇತ್ತ ಜಾನಕಿಗೆ ಮಿತಿಮೀರಿದ ಕೋಪ ಉಂಟಾಯಿತು. ಲಕ್ಷ್ಮಿಯನ್ನು ಕಂಡೊಡನೆಯೇ "ಏನೇ ಇದು ? ನಿನ್ನ ಅಟ್ಟಹಾಸವೆಲ್ಲವನ್ನೂ ಎಷ್ಟೊಂದು ದಿನಗಳವರೆವಿಗೆ ಸಹಿಸಿಕೊಂಡಿರಬಲ್ಲೆನೆಂದು ನಂಬಿರುವೆ ? ನಿನ್ನಿಷ್ಟ ಬಂದಾಗ ಕೆಲಸಕ್ಕೆ ಬರುವುದು, ಇಲ್ಲದಿದ್ದಾಗ ಮನೆಗೆ ಹೋಗಿಬಿಡುವುದೆಂದು ತಿಳಿದಿರುವಿಯೇನು ?" ಎಂದು ಕರ್ಣಕಠೋರವಾಗಿ ನುಡಿದಳು.

ಲಕ್ಷ್ಮಿ “ . . . ಇ . . . ಲ್ಲ . . . ತಾ . . . . ಯಾ ನಮ್ಮ ದೂರದ ನೆಂಟರೊಬ್ಬರು. . . . . . . . .” ಅನ್ನುವಷ್ಟರಲ್ಲಿಯೇ ಜಾನಕಿಯು “ಸಾಕು ಮಾಡು ನಿನ್ನ ಕಟ್ಟುಕತೆಯನ್ನು, ಇನ್ನುಮೇಲೆ ಈ ಕಂಟಜವಾಬು ಗಳನ್ನು ಇಲ್ಲಿ ಸೈರಿಸುವವರಾರೂ ಇಲ್ಲ, ಗೊತ್ತೇನು ? ಹೊರಟುಹೋಗು, ಈಗಲೇ ಹೊರಟುಹೋಗು ಊಂ. . . .” ಎಂದು ಅಪ್ಪಣೆಯಿತ್ತಳು.

ಲಕ್ಷ್ಮಿಯು ಇನ್ನು ಮಾತನಾಡಿ ಉಪಯೋಗವಿಲ್ಲವೆಂದು ಯಜ ಮಾನಿಯ ಕೋಪವನ್ನು ತಣಿಸಲೆಣಿಸಿದವಳಾಗಿ ಜಾನಕಿಯ ಮಡಿಲಲ್ಲಿ ಕುಳಿತಿದ್ದ ಮಗುವನ್ನು ಎತ್ತಿಕೊಳ್ಳಲು ಹೋದಳು.

ತಕ್ಷಣ ಜಾನಕಿಯು “ಊಹೂಂ . . . . . . . . ನೀನು ಅವಳನ್ನು ಮುಟ್ಟಬೇಕಾಗಿಲ್ಲ, ನೀನಿಲ್ಲದಿದ್ದಲ್ಲಿ ಉಷೆಯು ಬೆಳೆಯಲಾರಳೆಂದು ತಿಳಿದಿರುವಿಯೇನು ?” ಎಂದು ಮಗುವನ್ನು ಲಕ್ಷ್ಮಿಯ ಹತ್ತಿರಕ್ಕೆ ಹೋಗಗೊಡದೆ ಹಿಡಿದುಕೊಂಡಳು.

ಪುನಃ ಜಾನಕಿಯು “ನಿನ್ನ ವ್ಯವಹಾರಗಳನ್ನು ನಾನೂ ಸಹ ಕೆಲ ಕಾಲದಿಂದ ಗಮನಿಸುತ್ತಲೇ ಇದ್ದೇನೆ. ಈಚೆಗೆ ನಿನ್ನ ಕೆಲಸಗಳು ಸ್ವಲ್ಪವೂ ಚೆನ್ನಾಗಿಲ್ಲ. ಸ್ವಲ್ಪವೂ ಮೈಬಗ್ಗಿ ಕೆಲಸಮಾಡುವುದಿಲ್ಲ. ಇನ್ನು ಮೇಲೆ ನನ್ನ ಹತ್ತಿರ ಇವೆಲ್ಲವೂ ಜಗ್ಗಲಾರವು. ನನಗೂ ಸೈರಿಸಿ ಸೈರಿಸಿ ಸಾಕಾಗಿಹೋಗಿದೆ. ಹೊರಟುಹೋಗು, ಇಂದು ೧೭ನೆಯ ತಾರೀಕಲ್ಲವೆ ? ಆದರೆ ತಿಂಗಳ ಕೊನೆಯವರೆವಿಗೂ ಸಂಬಳ ತೆತ್ತುಬಿಡುತ್ತೇನೆ” ಎಂದು ಹೇಳಿ ಎದ್ದು ಬಿರಬಿರನೆ ಒಳಗೆಹೋಗಿ ಪೆಟ್ಟಿಗೆಯಿಂದ ೧೦ ರೂಪಾಯಿಯ ನೋಟೊಂದನ್ನು ತಂದು ಲಕ್ಷ್ಮಿಯ ಕಡೆಗೆ ಬಿಸಾಡಿದಳು.

ಲಕ್ಷ್ಮಿಯು ಉಕ್ಕುತ್ತಿರುವ ದುಃಖವನ್ನು ತಡೆಯಲಾರದೆ ಬಿಕ್ಕಿ ಬಿಕ್ಕಿ ಅಳಲು ಪ್ರಾರಂಭಿಸಿದಳು. “ಅಮ್ಮಾ, ಅಂತಹ ತಪ್ಪಿತವಾವುದನ್ನೂ ನನ್ನ ಮನಸ್ಸಾಕ್ಷಿಯಾಗಿ ನಾನು ಮಾಡಿದ್ದಿಲ್ಲ. ಏನೋ ಅಕಸ್ಮಾತ್ತಾಗಿ ನಮ್ಮ ದೂರದ ನಂಟರೊಬ್ಬರು ರೈಲಿನಲ್ಲಿ ಬಂದಿಳಿದರು. ಅವರಿಗೆ ತಿಂಡೀ ತಯಾರಿಸಿ ಉಣ್ಣಲು ಕೊಟ್ಟು ಬರಲು ಸ್ವಲ್ಪ ಹೊತ್ತಾಯಿತು. ತಪ್ಪಾ ಯಿತು. ತಾಯಿ ! ಅಯ್ಯೋ ! ಈ ಸಣ್ಣ ತಪ್ಪಿತಕ್ಕಾಗಿ ನನ್ನನ್ನು ನನ್ನ ಮುದ್ದು ಕಂದನಿಂದ ಅಗಲಿಸಬೇಡಿರಿ ತಾಯಿ !” ಎಂದು ಜಾನಕಿಗೆ

ಅಡ್ಡಬಿದ್ದು 'ಗೋಳೋ' ಎಂದು ಅತ್ತುಬಿಟ್ಟಳು. ರಾಯರಂತೂ ಮನೆಯಲ್ಲಿರಲಿಲ್ಲ, ಅವರ ಕಾಲಿಗಾದರೂ ಅಡ್ಡಬಿದ್ದು ಬೇಡಿಕೊಳ್ಳೋಣ ವೆಂದರೆ.

ಜಾನಕಿಯ ಹೃದಯವಂತೂ ಸ್ವಲ್ಪ ಕೂಡ ಕರಗಲಿಲ್ಲ. "ಸಾಕು ಮಾಡೆ, ನಿನ್ನ ನಟನೆಯನ್ನು. ರಾಯರು ಬಂದುಬಿಟ್ಟಾರು. ಗದ್ದಲ ಮಾಡಬೇಡ. ಹೊರಟುಹೋಗು" ಎಂದು ಗದರಿಸಿದಳು. ಇವರಿಬ್ಬರ ಗಲಾಟೆಯನ್ನು ನೋಡಿ ದಿಗ್ಭ್ರಮೆಹೊಂದಿದವಳಾಗಿ ಕಣ್ಣುಕಣ್ಣು ಬಿಡುತ್ತಾ ಕುಳಿತಿದ್ದ ಉಷೆಯು ಲಕ್ಷ್ಮಿಯು ಹೊರಟುಹೋಗುತ್ತಿರು ವುದನ್ನು ಕಂಡು "ಆಯಾ, ಆಯಾ" ಎಂದು ಕಿರಿಚಿಕೊಂಡು ಅವಳ ಹಿಂದೆಯೇ ಬೀದಿಗೆ ಓಡಿದಳು. ಆದರೆ ಜಾನಕಿಯು ಅವಳನ್ನು ಹೋಗ ಗೊಡದೆ, ತಡೆದು ಎತ್ತಿಕೊಂಡು ಒಳಗೆ ಹೊರಟುಹೋದಳು.

ಆಗ, ಬಾಲಕರ ಪಠ್ಯಪುಸ್ತಕದಲ್ಲಿರುವ ಗೋವಿನ ಕಥೆಯಲ್ಲಿ ಗೋವು ತಾನು ಮಾತುಕೊಟ್ಟು ಬಂದ ಹುಲಿರಾಯನ ಬಳಿಗೆ ತನ್ನ ಕರುವನ್ನು ಬಿಟ್ಟು ಹೋಗಲಾರದೆ ಪೇಚಾಡಿದಂತೆ ಲಕ್ಷ್ಮಿಯು ಪೇಚಾಡಿದಳು. ತನ್ನ ಮುದ್ದು ಗಿಣಿಗೆ ಒಂದು ಮುತ್ತನ್ನು ಸಹಾ ಕೊಡದೆ ಹೋಗುತ್ತಿರುವೆ ನಲ್ಲಾ ಎಂದು ಪರಿತಪಿಸಿದಳು. ಅವಳ ಕಾಲುಗಳು ಉಷೆಯನ್ನು ಬಿಟ್ಟು ಹೋಗಲಾರದೆ ಮುಂದಕ್ಕೆ ಹೆಜ್ಜೆ ಇಡಲಾರೆನೆಂದು ಮುಷ್ಕರ ಹಿಡಿದವು. ಕಣ್ಣುಗಳು ದುಃಖಾವೇಶದಿಂದ ಸಜಲವಾಗಿ ಮಂಕುಮಂಕಾಯಿತು. ತಲೆಯು ತಿರುಗಲಾಯಿತು. ಮುದುಕಿಯ ಅವಸ್ಥೆಯು ಹೀಗಿರುವಲ್ಲಿ ಉಷೆಯು ಗೋವಿನ ಕತೆಯಲ್ಲಿ ಬರುವ ಕರುವಿನಂತೆ ಲಕ್ಷ್ಮಿಯನ್ನು ಅಗಲಿರಲಾರದೇ ಅತ್ತು ಕರೆದಳು. ಅವಳನ್ನು ಸಮಾಧಾನಪಡಿಸಲೆಣಿಸಿ ಜಾನಕಿಯು ಮಾಡಿದ ಸರ್ವ ಪ್ರಯತ್ನವೂ ನಿಷ್ಫಲವಾಯಿತು. ಹೊರಗೆ ಹೋಗಿದ್ದ ಭೀಮರಾಯರು ಮನೆಗೆ ಹಿಂತಿರುಗಿದೊಡನೆಯೇ ವಿಷಯ ವನ್ನರಿತು ಜಾನಕಿಯನ್ನು ಕೋಪಿಸಿಕೊಂಡು ಮಗುವನ್ನು ಸಂತೈಸ ಲಾರಂಭಿಸಿದರು. ಅದೂ ನಿಷ್ಫಲವಾಯಿತು. ಉಷೆಯು ಆಹಾರವನ್ನೂ ಸಹಾ ತೆಗೆದುಕೊಳ್ಳದೆ "ಆಯಾ, ಆಯಾ, ಆಯಾ" ಎಂದು ಸರಿಸುತ್ತಾ ಅತ್ತೂ ಅತ್ತೂ ಸಾಕಾಗಿ ನಿದ್ರೆಹೋದಳು.

ಭೋಜನ ಮುಗಿದು ರಾಯರು ಕಛೇರಿಗೆ ಹೋದನಂತರ ಜಾನಕಿಯು ನಡುಮನೆಯಲ್ಲಿ ಕುಳಿತು ಅದಾವುದೋ ಒಂದು ಕಾದಂಬರಿಯನ್ನೋದುವುದರಲ್ಲಿ ತಲ್ಲೀನಳಾಗಿಬಿಟ್ಟಳು.

ಮಧ್ಯಾಹ್ನ ಘಂಟೆ ಎರಡು ಹೊಡೆಯಿತು. ಉಷೆಗೆ ಆಹಾರ ಕೊಡುವ ಸಮಯವಾದುದರಿಂದ ಜಾನಕಿಯು ಮಗುವು ಮಲಗಿದ್ದ ಕೊಠಡಿಗೆ ಹೋಗಿ ಮಗುವು ಎಚ್ಚರವಾಗಿರುವುದೇ ಎಂದು ನೋಡಿದಳು. ಮಗುವು ಅಲ್ಲಿರಲಿಲ್ಲ. ಮನೆಯೆಲ್ಲವನ್ನೂ ಹುಡುಕಿನೋಡಿದುದಾಯಿತು. ಎಲ್ಲೂ ಇಲ್ಲ. ಸೇವಕರನ್ನು ವಿಚಾರಿಸಿದುದೂ ಆಯಿತು. ನೆರೆಹೊರೆಯವರ ಮನೆಗಳಿಗೂ ಆಳುಗಳನ್ನು ಅಟ್ಟಿಸಿ ಹುಡುಕಿ ನೋಡಿಕೊಂಡು ಬರಹೇಳಿದಳು. ಅಲ್ಲೂ ಇಲ್ಲ. ಜಾನಕಿಗೆ ಭೀತಿ ಹೆಚ್ಚಲಾರಂಭಿಸಿತು. ಆ ರಸ್ತೆಯಲ್ಲಿದ್ದ ಒಂದು ಮನೆಯನ್ನೂ ಬಿಡದೆ ಹುಡುಕಿ ನೋಡಹೇಳಿದಳು. ಎಲ್ಲೂ ಮಗುವಿನ ಸುಳಿವಿಲ್ಲ.

ಸರಿ, ಲಕ್ಷ್ಮಿಯ ಮನೆಗೆ ಹೋಗಿ ನೋಡಿಕೊಂಡು ಬರಹೇಳಿ ಸೇವಕನನ್ನು ಕಳುಹಿಸಿದಳು. ಆದರೆ ಅವಳ ಮನೆ ಬೀಗ ಹಾಕಿತ್ತಂತೆ. ಜಾನಕಿಗೆ ಮಿತಿಮೀರಿದ ಭಯದಿಂದ ಮೈ ನಡುಗಲಾರಂಭಿಸಿತು. ತಲೆ ತಿರುಗಲಾರಂಭಿಸಿತು. ಕಣ್ಣುಗಳಲ್ಲಿ ಕಣ್ಣೀರು ಧಾರಾಕಾರವಾಗಿ ಸುರಿಯ ತೊಡಗಿತು. ಹೊಟ್ಟೆಯಲ್ಲಿ ಒಂದು ರೀತಿಯಾದ ಸಂಕಟವಾಗಲು ತೊಡಗಿತು. ತಕ್ಷಣ ಮಗುವು ಕಾಣದೇಹೋದ ಸಮಾಚಾರವನ್ನು ರಾಯರಿಗೆ ತಿಳಿಸಿಬಾರೆಂದು ಒಬ್ಬ ಸೇವಕನನ್ನು ಕಛೇರಿಗೆ ಓಡಿಸಿದಳು.

ಸೇವಕನು ಕಛೇರಿಗೆ ಹೋದ ಅರ್ಧ ಘಂಟೆಗೆಲ್ಲಾ ರಾಯರು ತಮ್ಮ ಮೋಟಾರಿನಲ್ಲಿ ಮನೆಯನ್ನು ಬಂದು ಸೇರಿದರು. ಮನೆಗೆ ಹೊರಡುವುದಕ್ಕೆ ಮುಂಚಿತವಾಗಿಯೇ ಅವರು ಮಗುವನ್ನು ಪತ್ತೆ ಮಾಡಬೇಕೆಂದು ಬೆಂಗಳೂರು ನಗರದ ಪ್ರತಿಯೊಂದು ಪೋಲೀಸು ಸ್ಟೇಷನ್ನಿಗೂ ಮಗುವಿನ ಗುರುತುಗಳನ್ನೂ, ವಯಸ್ಸನ್ನೂ ಹೆಸರನ್ನೂ ತಿಳಿಸಿ 'ಫೋನ್' ಮಾಡಿ ಬಂದರು. ಅವರ ಮುಖವು ವ್ಯಸನದಿಂದ ಸುಟ್ಟ ಬದನೇಕಾಯಿಯಂತೆ ಕಂದಿಹೋಗಿತ್ತು. ಹಣೆಯಲ್ಲಿ ಬೆವರಿನ ಬಿಂದುಗಳು ತುಂಬಿದ್ದವು. ಮುಖದ ಛಾಯೆಯು ಅವರ ವಯಸ್ಸಿಗೆ ಹತ್ತು

ವರ್ಷಗಳು ಹೆಚ್ಚಾಗಿ ಕೂಡಿಸಿ ಹೇಳಬಹುದೆಂಬಂತೆ ಬದಲಾವಣೆ ಹೊಂದಿತ್ತು. ಅವರಿನ್ನೂ ಕಾರಿನಿಂದಿಳಿದು ಮನೆಯ ಮೆಟ್ಟಿಲುಗಳನ್ನು ಹತ್ತುತ್ತಿರುವಷ್ಟರಲ್ಲಿಯೇ ಲಕ್ಷ್ಮಿಯು ಉಷೆಯನ್ನು ಸೊಂಟದಲ್ಲೆತ್ತಿ ಕೊಂಡು ಮನೆಯ ಮುಂದೆ ಪ್ರಸನ್ನಳಾದಳು! ರಾಯರು ಅತ್ಯಾನಂದಿತ ರಾಗಿ ಲಕ್ಷ್ಮಿಯನ್ನು ಕುರಿತು "ಏನೇ ಇದು ಆಟ ನಿನ್ನದು! ಮಗುವೆಲ್ಲಿ ಸಿಕ್ಕಿದಳೇ ನಿನಗೆ?" ಎಂದು ಕೇಳುತ್ತಾ ಮಗುವನ್ನು ಎತ್ತಿ ಮುದ್ದಾಡ ಬೇಕೆಂಬ ಉತ್ಸುಕತೆಯಿಂದ ಕೈನೀಡಿದರು. ಆದರೆ ಮಗುವು ಕಿಟ್ಟನೆ ಕಿರಿಚುತ್ತಾ ಲಕ್ಷ್ಮಿಯ ಕೊರಳನ್ನು ಬಲವಾಗಿ ತಬ್ಬಿಕೊಂಡಳು.

ಲಕ್ಷ್ಮಿಯು ಮಗುವಿನ ಬೆನ್ನನ್ನು ಆದರದೊಡನೆ ಸವರುತ್ತಾ "ಬುದ್ಧೀ! ನಾನು ದಿನವಹಿ ಮಗುವನ್ನು ಕೈಗಾಡಿಯುಲ್ಲಿ ಕುಳ್ಳಿರಿಸಿ ಕೊಂಡು ತಿರುಗಾಡಲಿಕ್ಕೆ ಕರೆದುಕೊಂಡು ಹೋಗುವಾಗ ನಮ್ಮ ಬಸವನ ಗುಡಿ ಅಂಗಡಿ ಬೀದಿಯಲ್ಲಿ ಒಂದು ಅಂಗಡಿಗೆ ಹೋಗಿ ಮಾಮೂಲಾಗಿ ಎಲೆ ಅಡಿಕೆ ಕೊಂಡುಕೊಳ್ಳುವ ವಾಡಿಕೆ. ನನ್ನ ಕಂದನು ಆ ಅಂಗಡಿ ಯನ್ನು ಗುರುತಿಟ್ಟುಕೊಂಡು ಅಲ್ಲಿಗೆ ನನ್ನನ್ನು ಹುಡುಕಿಕೊಂಡು ಒಂಟಿ ಯಾಗಿ ಬಂದಿತಂತೆ. ಅಂಗಡಿಯುವನು ಮಗುವನ್ನು ಅದರ ಮನೆಯನ್ನು ಹುಡುಕಿ ತಂದುಬಿಡೋಣವೆಂದರೆ ಮಗುವು ಅವನನ್ನು ಮುಟ್ಟಗೊಡದೆ "ಆಯಾ ಆಯಾ" ಎಂದು ಅಳುವುದಕ್ಕೆ ಪ್ರಾರಂಭಿಸಿಬಿಟ್ಟಿತು. ಅಷ್ಟರಲ್ಲಿ ನಾನೂ ಮನೆಯ ಕೆಲಸ ಮುಗಿದನಂತರ ಮನೆಗೆ ಬೀಗ ಹಾಕಿಕೊಂಡು ಎಲೆ ಅಡಿಕೆ ಕೊಳ್ಳಲು ಅಂಗಡಿಗೆ ಬಂದೆ. ನನ್ನ ಭಂಗಾರ ನನಗೆ ಸಿಕ್ಕಿತು. "ಆಯಾ ನನ್ನನ್ನು ಮನೆಗೆ ಕರೆದುಕೊಂಡು ಹೋಗಬೇಡ. ಅಮ್ಮ ಬಯ್ತಾಳೆ. ನಾನು ನಿನ್ನ ಮನೆಗೇ ಬರುತ್ತೇನೆ. ನೀನೇ ಬೇಕು ನನಗೆ" ಎಂದು ನನ್ನನ್ನು ತಬ್ಬಿಕೊಂಡು ಅತ್ತುಬಿಟ್ಟಿತು. ಎಷ್ಟೆಷ್ಟೋ ಸಮಾಧಾನ ಹೇಳಿ ನೀವೆಲ್ಲರೂ ಮಗುವನ್ನು ಕಾಣದೆ ಎಲ್ಲಿ ಹುಡುಕುತ್ತಿದೀರೋ ಎಂದು ಓಡಿಬಂದೆ" ಎಂದು ಹೇಳಿ ಮಗುವನ್ನು ಮುದ್ದಾಡಿದಳು.

ಈ ಗದ್ದಲವನ್ನು ಕೇಳಿ ಒಳಗಿದ್ದ ಜಾನಕಿಯು ಬೀದಿಯ ಬಾಗಿಲಿಗೆ ಓಡಿಬಂದಳು. ಉಷೆಯು ಬೆಚ್ಚಿಬಿದ್ದು ತನ್ನ ಪುಟಾಣಿ ಕೈಯನ್ನೆತ್ತಿ ಜಾನಕಿಯ ಕಡೆಗೆ ತೋರಿಸಿ "ಅಗೋ, ಅಮ್ಮಾ ಬಂದಳು! ಬಾ, ಆಯಾ

ಓಡಿಹೋಗೋಣ" ಎಂದು ಮುಖವನ್ನು ಬೇರೆ ಕಡೆಗೆ ತಿರುಗಿಸಿಕೊಂಡು ಪುನಃ ಮುದುಕಿಯ ಕೊರಳನ್ನು ಬಿಗಿಯಾಗಿ ಕಟ್ಟಿಕೊಂಡು ಅಳಲು ಪ್ರಾರಂಭಿಸಿದಳು.

ರಾಯರು "ಬಾಮ್ಮಾ ಪಾಪು. ಆಯಾವನ್ನು ಇನ್ನೆಲ್ಲೂ ಕಳುಸೋಲ್ಲ. ನಿನ್ನ ಹತ್ತಿರವೇ ಇರುತ್ತಾಳೆ" ಎಂದು ಮಗುವಿಗೆ ಧೈರ್ಯ ಹೇಳಿದರು. ಜಾನಕಿಯೂ ಸಹ ವಿಷಯಗಳನ್ನು ಕೇಳಿ ತಿಳಿದುಕೊಂಡು "ಲೇ ತುಂಟಿ! ಬಾರೇ ಇಲ್ಲಿ ದೇವರಾಣೆಗೂ ಆಯಾನ್ನ ಅಟ್ಟಿಸೋಲ್ಲಾ. ಬಾ, ತಾಯಿ!" ಎಂದು ಮಗುವನ್ನು ಎತ್ತಿ ಎದೆಗೆ ಅಪ್ಪಿಕೊಂಡು ಮುದ್ದಿಟ್ಟು ಪುನಃ ಲಕ್ಷ್ಮಿಯ ವಶಕ್ಕೆ ಕೊಟ್ಟಳು.

ಅಲ್ಲಿ ನೆರೆದಿದ್ದವರೆಲ್ಲರ ಕಣ್ಣುಗಳಲ್ಲಿಯೂ ಆನಂದಬಾಷ್ಪವು ಸುರಿಯಿತು. ಈಗ ಉಷೆಯ ಮೇಲಿನ ಲಕ್ಷ್ಮಿಯ ವಾತ್ಸಲ್ಯವು ಹೆಚ್ಚೋ, ಅಥವಾ ಜಾನಕಿಯ ಮಾತೃವಾತ್ಸಲ್ಯವು ಹೆಚ್ಚೋ ಎಂಬುದನ್ನು ತಕ್ಕಡಿಯಲ್ಲಿ ತೂಗಿ ನೋಡಬೇಕಷ್ಟೇ!



903—43. ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರಾದ
ಜಿ. ಶ್ರೀನಿವಾಸರಾಯರವರು ಮುದ್ರಿಸಿರುವರು.